KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಡಿಸೆಂಬರ್ ೯, ೨೦೧೦ (ಮಾರ್ಗಶಿರ ೧೮, ಶಕ ವರ್ಷ ೧೯೩೨) | ಸಂಚಿಕೆ ೪೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ** : ಚಾಮರಾಜನಗರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಮತ್ತು ಸಿ.ಜೆ.ಎಂ. ನ್ಯಾಯಾಲಯ ಮತ್ತು ಆರಕ್ಷಕ ಅಧೀಕ್ಷಕರ ಕಛೇರಿಗೆ ಹೊಂದಿಕೊಂಡಂತೆ ಅಭಿಯೋಜಕರ ಹಾಗೂ ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂ.ಹೆಚ್ ಡಿ 172 ಪಿಒಪಿ 97(6),ದಿನಾಂಕ: 02.02.1998,
2. ಸರ್ಕಾರದ ಆದೇಶ ಸಂ.ಲಾ 309 ಎಲ್‌ಸಿಇ 2002,ದಿನಾಂಕ: 27.06.2002.
3. ಸರ್ಕಾರದ ಆದೇಶ ಸಂ:ಲಾ 7ಎಲ್‌ಸಿಇ 2002, ದಿನಾಂಕ:21.08.2004,
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ಸಿಶಾ.1/150/2008–09, ದಿನಾಂಕ:27.05.2010.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:2.2.1998ರ ಸರ್ಕಾರದ ಆದೇಶದನ್ವಯ ನೂತನ ಚಾಮರಾಜನಗರ ಜಿಲ್ಲೆಗೆ ಆರಕ್ಷಕ ಅಧೀಕ್ಷಕರ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ:27.06.2002ರ ಸರ್ಕಾರದ ಆದೇಶದನ್ವಯ ನೂತನ ಚಾಮರಾಜನಗರ ಜಿಲ್ಲೆಯ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯವನ್ನು ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಮತ್ತು ಸಿ.ಜೆ.ಎಂ. ನ್ಯಾಯಾಲಯ ಎಂದು ಪದನಾಮವನ್ನು ಬದಲಾವಣೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 21.08.2004ರ ಸರ್ಕಾರದ ಆದೇಶದನ್ವಯ ನೂತನ ಚಾಮರಾಜನಗರ ಜಿಲ್ಲೆಯಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯವನ್ನು ಸ್ಥಾಪಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(4)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 27.05.2010ರ ಪತ್ರದಲ್ಲಿ ಮೇಲೆ ಕ್ರಮ ಸಂಖ್ಯೆ (1)ರಿಂದ (3)ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ವಯ ಕಾರ್ಯಾರಂಭಗೊಂಡಿರುವ ಕಛೇರಿ ಹಾಗೂ ನ್ಯಾಯಾಲಯಗಳಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಪ್ರಕರಣಗಳನ್ನು ನಡೆಸುವ ಸಲುವಾಗಿ ಚಾಮರಾಜನಗರ ಜಿಲ್ಲೆಯ ಆರಕ್ಷಕ ಅಧೀಕ್ಷಕರ ಕಛೇರಿಗೆ ಹೊಂದಿಕೊಂಡಂತೆ ಒಂದು ಸಹಾಯಕ ಅಭಿಯೋಗ ನಿರ್ದೇಶಕರ, ಒಂದು ಶೀಘ್ರಲಿಪಿಗಾರರ ಮತ್ತು ಒಂದು ದಲಾಯತರ ಹುದ್ದೆಯನ್ನು, ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಮತ್ತು ಸಿ.ಜೆ.ಎಂ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಒಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಹಾಗೂ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಒಂದು ಅಧೀಕ್ಷಕರ, ಒಂದು ಪ್ರಥಮ ದರ್ಜೆ ಸಹಾಯಕರ, ಒಂದು ಶೀಘ್ರಲಿಪಿಗಾರರ, ಒಂದು ಬೆರಳಚ್ಚುಗಾರರ, ಒಂದು ಅಟೆಂಡರ್ ಹಾಗೂ ಒಂದು ದಲಾಯತ್‌ರ ಹುದ್ದೆಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಸೃಜಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಒಇ 194 ಪಿಪಿಇ 2009, ಬೆಂಗಳೂರು, ದಿನಾಂಕ 23ನೇ ಆಗಸ್ಟ್ 2010**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಚಾಮರಾಜನಗರ ಜಿಲ್ಲೆಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಮತ್ತು ಆರಕ್ಷಕ ಅಧೀಕ್ಷಕರ ಕಛೇರಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಈ ಕೆಳಕಂಡ ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

1) ಚಾಮರಾಜನಗರ ಜಿಲ್ಲೆಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸೃಜಿಸಲಾಗಿರುವ ಹುದ್ದೆಗಳು:

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಸೃಜಿಸಲಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 |
| 2 | ಪ್ರಥಮ ದರ್ಜೆ ಸಹಾಯಕರು | 01 |
| 3 | ಶೀಘ್ರ ಲಿಪಿಗಾರ / ಬೆರಳಚ್ಚುಗಾರ | 01 |
| 4 | ಅಟೆಂಡರ್ | 01 |
| ಒಟ್ಟು | | 04 |

2) ಚಾಮರಾಜನಗರ ಆರಕ್ಷಕ ಅಧೀಕ್ಷಕರ ಕಛೇರಿಗೆ ಹೊಂದಿಕೊಂಡಂತೆ ಸೃಜಿಸಲಾಗಿರುವ ಹುದ್ದೆಗಳು:

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಸೃಜಿಸಲಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಅಭಿಯೋಗ ನಿರ್ದೇಶಕರು | 01 |
| 2 | ಶೀಘ್ರಲಿಪಿಗಾರ / ಬೆರಳಚ್ಚುಗಾರ | 01 |
| | ಒಟ್ಟು | 02 |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014– ನ್ಯಾಯಪರಿಪಾಲನೆ–00–114– ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು" ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 173 ವೆಚ್ಚ–11/2010, ದಿನಾಂಕ: 27.07.2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ
ಮತ್ತು ಅಭಿಯೋಗಗಳು)

ಪಿ.ಆರ್ 2252

## ENERGY SECRETARIAT

**Sub:** Transfer of 2.1 MW wind power capacity in favour of M/s ITC Limited-reg.

**Read:** 1. Government Order No: EN 191 NCE 2005 dated: 19.08.2005.

**2.** Government Order No: EN 100 NCE 2005 dated: 30.08.2005.

**3.** Government Order No: EN 177 NCE 2008 dated: 24.12.2008.

**4**. Letter No: KRED/08/ITC(SND-13)-SIL//2010/2279 dated: 27/31.07.2010 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order read at (1) above, sanction has been accorded to implement 82.6 MW capacity Wind Power Project at Raichur and Bellary District to M/s Suzlon Developers Limited.

In the Government Order read at (2) above, Sanction has been accorded for change of company 's name from M/s Suzlon Developers Limited and M/s Suzlon Developers Private Limited to M/s Suzlon Infrastructure Limited.

In the Government order read at (3) above, Sanction has been accorded for enhancement of wind power capacity from 15.60 MW (part capacity of 82.6 MW) to 40.25 MW in favour of M/s Suzlon Infrastructure Limited at Kurgod Sindagere site, Bellary District.

The Managing Director, Karnataka Renewable Energy Development Limited, Bangalore in his letter read at (4) above, has recommended to the Government for transfer of 2.1 MW wind power capacity in favour of M/s ITC Limited from out of the 40.25 MW capacity sanctioned in favour of M/s Suzlon Infrastructure Limited at Sindgere sit in land Sy. No. 77 of Sindagere village, Bellary Taluk and District and further the M.D., KREDL has stated that the proposed project is scheduled for commissioning during the Financial year 2010-11.

The proposal has been examined in detail and issued the following Orders:-

**GOVERNMENT ORDER NO: EN 333 NCE 2010, BANGALORE DATED; 19.08.2010.**

Government accords approval for transfer of 2.1 MW wind power capacity in favour of M/s ITC Limited from out of the 40.25 MW capacity sanctioned in favour of M/s suzlon Infrastructure limited at Sindgere site in land Sy. No.77 of Sindagere village, Bellary Taluk and District as detailed below and subject to the following conditions:-

| Village Name | Taluk & District | Land Survey Number | Extent in land | Wind Turbine Generator location No. |
|---|---|---|---|---|
| Sindgere | Bellary/Bellary | 77 | 2 Acres per WTG of capacity 2.1 MW for 1 No. of WTG | SND-13 |

1. M/s ITC Limited shall execute an agreement with Government within 45 (fortyfive) days from the date of issue of this Order.
2. M/s ITC Limited to approach the SLDC for the execution of Wheeling and Banking agreement.
3. The Government reserves the right to Cancel/modify this Order.

The other terms and conditions of the Government Order read at(1) above shall **IPSO FACTO** applicable.

By Order and in the name of the Governor of Karnataka
**S.J. SAMPATH KUMAR**
Under Secretary to Government
Energy Department

P.R. 2253

## ನಗರಾಭಿವೃದ್ಧಿ ಸಚಿವಾಲಯ

**ವಿಷಯ** : ಬಿಜಾಪುರ ಜಿಲ್ಲೆಯ ತಾಳಿಕೋಟೆ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 2027.00 ಲಕ್ಷಗಳಲ್ಲಿ ಕಲ್ಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ** : ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರ ಪತ್ರ ಸಂಖ್ಯೆ: ಕಜಮಂ:ವ್ಯ.ನಿ:ಮುಅ(ಉ):ಉಮುಅ–(ಎಂ):ತಾಳೀಕೋಟೆ:3488:2009–10 ದಿನಾಂಕ:8–3–2010.

**ಪ್ರಸ್ತಾವನೆ:**

ತಾಳೀಕೋಟೆ ಪಟ್ಟಣವು ಮುದ್ದೇಬಿಹಾಳ ತಾಲ್ಲೂಕಿನಲ್ಲಿದ್ದು, 2001ರ ಜನಗಣತಿಯಂತೆ ಈ ಪಟ್ಟಣದ ಜನಸಂಖ್ಯೆಯು 26,317 ಇದ್ದು, ಪ್ರಸ್ತುತ 33,000 ಇರುತ್ತದೆ. ತಾಳಿಕೋಟೆ ಪಟ್ಟಣಕ್ಕೆ ಹಾಲಿ ನಾರಾಯಣಪುರ ಎಡದಂಡೆ ಕಾಲುವೆ ಮೂಲದಿಂದ ತಲಾ 90 ಲೀಟರ್‌ನಂತೆ ನೀರು ಸರಬರಾಜು ಮಾಡಲಾಗುತ್ತಿದ್ದು, ಪಟ್ಟಣದ ನೀರು ಸರಬರಾಜು ವ್ಯವಸ್ಥೆಯನ್ನು ಪುರಸಭೆಯು ನಿರ್ವಹಿಸುತ್ತಿದೆ. ಪ್ರಸ್ತುತ ಒದಗಿಸುತ್ತಿರುವ ನೀರು ಸಾಕಾಗುತ್ತಿಲ್ಲದ ಕಾರಣ ಮತ್ತು ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವ ಪ್ರಸ್ತಾಪ ಇರುವುದರಿಂದ, ರೂ.932.70 ಲಕ್ಷಗಳ ಅಂದಾಜು ವೆಚ್ಚದಲ್ಲಿ ಸಮಗ್ರ ನೀರು ಸರಬರಾಜು ಅಭಿವೃದ್ಧಿ ಯೋಜನೆಯನ್ನು ಸರ್ಕಾರಕ್ಕೆ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಲಾಗಿದೆ. ಸದರಿ ಯೋಜನೆಯ ಅನುಷ್ಠಾನದ ನಂತರ ಪಟ್ಟಣದಲ್ಲಿ ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರು ಸರಬರಾಜು ಮಾಡಲು ಸಾಧ್ಯವಾಗುತ್ತದೆ.

ತಾಳೀಕೋಟೆ ಪಟ್ಟಣದಲ್ಲಿ ಸಧ್ಯಕ್ಕೆ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ತ್ಯಾಜ್ಯನೀರನ್ನು ತೆರೆದ ಚರಂಡಿಗಳಿಗೆ ಬಿಡುತ್ತಿರುವುದರಿಂದ, ನಾಗರೀಕರ ಆರೋಗ್ಯದ ಮೇಲೆ ವಿಪರೀತ ಪರಿಣಾಮ ಉಂಟಾಗುತ್ತಿದ್ದು, ಈ ಹಿಂದೆ ಪಟ್ಟಣವನ್ನು ಮಲೇರಿಯಾ ಪೀಡಿತ ಪ್ರದೇಶವೆಂದು ಗುರುತಿಸಲಾಗಿದೆ. ಆದ್ದರಿಂದ, ಪಟ್ಟಣದಲ್ಲಿ ಒಳಚರಂಡಿ ಯೋಜನೆಯನ್ನು 2016ರಲ್ಲಿ ಮಧ್ಯಂತರ ಹಂತಕ್ಕೆ ನಿರೀಕ್ಷಿಸಲಾದ 37,500 ಹಾಗೂ 2041ರ ಅಂತಿಮ ಹಂತಕ್ಕೆ 44,600 ಜನಸಂಖ್ಯೆಯಾಗಬಹುದೆಂದು ಅಂದಾಜಿಸಿ, ತಲಾ ದಿನಂಪ್ರತಿ 113 ಲೀಟರ್ ಗ್ರಾಮಸಾರವನ್ನು ಪರಿಗಣಿಸಿ, ಒಳಚರಂಡಿ ಯೋಜನೆಯನ್ನು ವಿನ್ಯಾಸಿಸಲಾಗಿದೆ.

ಸದರಿ ಯೋಜನೆಯ ಅಂದಾಜು ಪ್ರತಿಯನ್ನು 2009–10ನೇ ಸಾಲಿನ ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ ದರಪಟ್ಟಿ ಆಧರಿಸಿ ರೂ.2027–00 ಲಕ್ಷಗಳಿಗೆ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರು ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಕರ್ನಾಟಕ ಸರ್ಕಾರದ ಸಾಲ(30%) | ರೂ. 608.10 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ(50%) | ರೂ. 1013.50 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಕೆ (20%) | ರೂ. 405.40 ಲಕ್ಷಗಳು |
| ಒಟ್ಟು | **ರೂ.2027.00 ಲಕ್ಷಗಳು** |

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ನಅಇ02 ಯುಡಿಎಸ್ 2010, ಬೆಂಗಳೂರು, ದಿನಾಂಕ: 19–8–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬಿಜಾಪೂರ ಜಿಲ್ಲೆ, ತಾಳೀಕೋಟೆ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ.2027.00ಲಕ್ಷಗಳಲ್ಲಿ (ರೂ. ಎರಡು ಸಾವಿರದ ಇಪ್ಪತ್ತೇಳು ಲಕ್ಷಗಳಲ್ಲಿ ಮಾತ್ರ) ಒಳಚರಂಡಿ ಯೋಜನೆಯಡಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಈ ಕೆಳಕಂಡ ಷರತ್ತುಗಳನ್ವಯ ಕೈಗೆತ್ತಿಕೊಳ್ಳಲು ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

(i) ETP,Tender premium, escalation charges to be kept within 5% and the estimate should be revised accordingly.

(ii) UGD Rates as proposed by KUWS&DB., have to be implemented to meet the O&M cost.

(iii) KTPP provisions, quality control and timely completion should be ensured.

(iv) ಯೋಜನೆಯನ್ನು ನಿಗಧಿತ ಅವಧಿಯೊಳಗೆ ಪೂರೈಸುವುದು ಮತ್ತು ಅವಧಿ ಮೀರಿ ಪೂರೈಸುವ ಕಾಮಗಾರಿಗಳ ಹೆಚ್ಚಿನ ಹೊರೆಯನ್ನು ಯೋಜನೆಗೆ ವಿಧಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 2254

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ** : ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು ಸಾವಳಗಿ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ** : ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ(ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/2009–10/1475, ದಿನಾಂಕ: 10/03/2010.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು ಸಾವಳಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಹಾಲಳ್ಳಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಅಥಣಿ ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ(ಉತ್ತರ)ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 10/03/2010ರ ಪತ್ರದಲ್ಲಿ ಕೋರಿರುತ್ತಾರೆ. ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿವೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 01/03/2007,
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 11(ಎ)ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ:23/10/2007.

ಭೂಸ್ವಾಧೀನಕ್ಕೊಳಪಟ್ಟ ಹಾಲಳ್ಳಿ ಗ್ರಾಮದ ಜಮೀನುಗಳಿಗೆ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಹಣ ಪಡೆದು ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ 1894ರ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಅಥಣಿ ಇಲ್ಲಿ ಪ್ರಕರಣಗಳನ್ನು ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ: 09/04/2009ರಂದು ನೀಡಿದ ತೀರ್ಪಿನಲ್ಲಿ ಹೆಚ್ಚಿನ ಪರಿಹಾರ ನೀಡುವಂತೆ ಆದೇಶಿಸಿರುತ್ತದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 997 ಎಲ್‌ಸಿಬಿ 2009, ದಿನಾಂಕ: 13/05/2009ರಂದು ಅಭಿಪ್ರಾಯ ನೀಡಿರುತ್ತದೆ.

ನ್ಯಾಯಾಲಯವು ಹೆಚ್ಚುವರಿ ಪರಿಹಾರಕ್ಕೆ ತೀರ್ಪು ನೀಡಿರುವ ವಿವರ ಈ ಕೆಳಕಂಡಂತಿದೆ.

ರೂ.ಗಳಲ್ಲಿ

| ಕ್ರಮ ಸಂಖ್ಯೆ | ಎಲ್.ಎ.ಸಿ ಸಂಖ್ಯೆ | ಹಾಲಳ್ಳಿ ಗ್ರಾಮದ ಸರ್ವೆ ನಂಬರ್ | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ |
|---|---|---|---|---|
| 1 | 12/08 | 63/1ಎ | 0–37 | 276570 |
| 2 | 13/08 | 63/3ಎ | 0–20 | 91192 |
| 3 | 14/08 | 63/3ಎ | 1–25 | 349547 |
| 4 | 15/08 | 63/3ಬಿ | 1–29 | 362481 |
| 5 | 16/08 | 64/1ಎ,64/1ಬಿ | 1–19,0–23 | 450396 |
| 6 | 17/08 | 64/1ಸಿ | 1–25 | 331334 |
| 7 | 18/08 | 65/1ಎ | 2–21 | 543296 |
| 8 | 19/08 | 65/1ಬಿ/3 | 1–05 | 221002 |
| 9 | 20/08 | 65/1ಬಿ/3 | 2–31 | 629876 |
| 10 | 21/08 | 65/2 | 0–22 | 164447 |
| **ಒಟ್ಟು** | | | | 3420141 |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 54 ಭೂಸ್ವಾಪ್ರ 2010 ಬೆಂಗಳೂರು ದಿನಾಂಕ: 23/08/2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು ಸಾವಳಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಹಾಲಳ್ಳಿ ಗ್ರಾಮಕ್ಕೆ ಸೇರಿದ ಪ್ರಸ್ತಾಪಿತ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯ ಅನುಸಾರ ಲೆಕ್ಕಹಾಕಿ ಪರಿಹಾರಮೊತ್ತ ರೂ. 34,20,141–00(ಮೂವತ್ತನಾಲ್ಕು ಲಕ್ಷದ ಇಪ್ಪತ್ತು ಸಾವಿರದ ಒಂದು ನೂರ ನಲ್ವತ್ತೊಂದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

1) ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು, ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2) ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ " 4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು– ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

ಪಿ.ಆರ್ 2255

## ವಸತಿ ಸಚಿವಾಲಯ

**ವಿಷಯ** : "ಆಸರೆ" ಯೋಜನೆಯಡಿಯಲ್ಲಿ ನಿರ್ಮಿಸಲಾಗುತ್ತಿರುವ ಮನೆಗಳ ನಿರ್ಮಾಣ ವೆಚ್ಚವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ: ವಇ 16 ಹೆಚ್ ಎಹೆಚ್ 2010, ದಿನಾಂಕ 12–03–2010.
2. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/ಆಸರೆ/5033/2010, ದಿನಾಂಕ 12–8–2010.

**ಪ್ರಸ್ತಾವನೆ:**

ಕಳೆದ ವರ್ಷ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಸುರಿದ ಭಾರಿ ಮಳೆ ಮತ್ತು ನೆರೆಹಾವಳಿಯಿಂದ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ "ಆಸರೆ" ಯೋಜನೆಯಡಿ ನಿರ್ಮಿಸಲಾಗುತ್ತಿರುವ 300 ಚದರ ಅಡಿ ಶೌಚಾಲಯ ಸಹಿತ ಮನೆಗಳ ನಿರ್ಮಾಣಕ್ಕೆ ತಳಪಾಯ ಗಟ್ಟಿ ಇರುವ ಪ್ರದೇಶಗಳಲ್ಲಿ ಘಟಕ ವೆಚ್ಚ ರೂ. 1.25 ಲಕ್ಷಗಳಿಗೆ ಮತ್ತು ಕಪ್ಪು ಮಣ್ಣಿನ ಪ್ರದೇಶ ಹಾಗೂ ದುರ್ಬಲ ಅಡಿಪಾಯಗಳ ಪ್ರದೇಶಗಳಲ್ಲಿ ರೂ.1.35 ಲಕ್ಷ ರೂ.ಗಳನ್ನು ನಿಗದಿಪಡಿಸಲಾಗಿತ್ತು. ಮನೆಗಳ ನಿರ್ಮಾಣಕ್ಕೆ ಬೇಕಾಗಿರುವ ಕಚ್ಚಾ ಸಾಮಗ್ರಿಗಳ ಬೆಲೆಯಲ್ಲಿ ಹಾಗೂ ಕಾರ್ಮಿಕರ ಕೂಲಿ ದರಗಳಲ್ಲಿ ವಿಪರೀತ ಹೆಚ್ಚಳದಿಂದಾಗಿ ಈಗ ನಿಗದಿಪಡಿಸಿರುವ ಘಟಕ ವೆಚ್ಚಗಳಲ್ಲಿ ಮನೆಗಳ ನಿರ್ಮಾಣ ಕಷ್ಟಸಾಧ್ಯವೆಂದು ಕಂಡು ಬಂದ ಹಿನ್ನೆಲೆಯಲ್ಲಿ ಈ ವಿಷಯವನ್ನು ಮಾನ್ಯ ವಸತಿ, ವಾರ್ತಾ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಬೆಂಗಳೂರು ಜಲಮಂಡಳಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 28–7–2010ರಂದು ನಡೆದ ಸಭೆಯಲ್ಲಿ ವಿಸ್ತೃತವಾಗಿ ಚರ್ಚಿಸಿ ಮನೆಗಳ ನಿರ್ಮಾಣದ ಘಟಕ ವೆಚ್ಚವನ್ನು ಹೆಚ್ಚಿಸಲು ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರವು ಅನುಮೋದಿಸಿದ್ದು, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ವಇ 16 ಹೆಚ್‌ಎಹೆಚ್ 2010, ಬೆಂಗಳೂರು, ದಿನಾಂಕ 21ನೇ ಆಗಸ್ಟ್ 2010**

"ಆಸರೆ" ಯೋಜನೆಯಡಿಯಲ್ಲಿ ನಿರ್ಮಿಸುತ್ತಿರುವ ಮನೆಗಳ ನಿರ್ಮಾಣಕ್ಕೆ ಅವಶ್ಯವಿರುವ ಕಚ್ಚಾ ಸಾಮಗ್ರಿಗಳ ಬೆಲೆಗಳಲ್ಲಿ ಹಾಗೂ ಕಾರ್ಮಿಕರ ಕೂಲಿದರಗಳ ಹೆಚ್ಚಳದಿಂದಾಗಿ ಈ ಹಿಂದೆ ನಿಗದಿಪಡಿಸಿದ ಘಟಕ ವೆಚ್ಚದಲ್ಲಿ ಮನೆಗಳ ನಿರ್ಮಾಣ ಕಷ್ಟಸಾಧ್ಯವಾಗಿದ್ದರಿಂದ ಪ್ರತಿ ಮನೆ ನಿರ್ಮಾಣಕ್ಕೆ ಘಟಕ ವೆಚ್ಚವನ್ನು ರೂ.5,000,00 ಗಳಷ್ಟು ಹೆಚ್ಚಿಸಿ ತಳಪಾಯ ಗಟ್ಟಿ ಇರುವ ಪ್ರದೇಶಗಳಲ್ಲಿ ಮನೆ ನಿರ್ಮಾಣದ ಘಟಕ ವೆಚ್ಚವನ್ನು ರೂ. 1.30 ಲಕ್ಷಗಳಿಗೆ ಮತ್ತು ಕಪ್ಪು ಮಣ್ಣಿನ ಪ್ರದೇಶ ಹಾಗೂ ದುರ್ಬಲ ಅಡಿಪಾಯ ಪ್ರದೇಶಗಳ ಮನೆ ನಿರ್ಮಾಣಕ್ಕೆ ಘಟಕ ವೆಚ್ಚವನ್ನು ರೂ. 1.40 ಲಕ್ಷಗಳಿಗೆ ನಿಗದಿಪಡಿಸಲಾಗಿದೆ.

2. ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: PSCM/F-4480/2010, ದಿನಾಂಕ 29–07–2010ರಲ್ಲಿ ನೀಡಿದ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಕೆ. ಆರ್. ವಲ್ಲೂರ
ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್ 2256

## INFRASTRUCTURE DEVELOPMENT SECRETARIAT

**Sub:** Release of State Share towards Bidar Gulbarga New Railway Line Project.

**Read:**
1. G.O.No.IDD 12 NSW 2004 dated 5.09.2007
**2.** G.O.No.IDD 12 NSW 2004 dated 28.09.2007
**3**. G.O.No.IDD 12 NSW 2004 dated 21.01.2008
**4**. G.O.No.IDD 12 NSW 2008 dated 13.05.2008
**5**. G.O.No.IDD 12 NSW 2008 dated 26.06.2009
6. Letter No. W.Con/338/G/90Vol.V dated 22.6.10 from the General Manager, South Central Railway, Secunderabad.

**PREAMBLE:**

In the Government Order read at Sl.No.(1) above, the State Government has accorded sanction for taking up Bidar-Gulbarga new railway project on 50:50 cost sharing basis between the Ministry of railways and Government of Karnataka and for releasing 50% of the cost required for completion of the project within a period of 3 years.

2. In the G.O. read at Sl. No.(2) to (5) above the State Government has released so far an amount of Rs. 65.00 crore towards the share of the State Government for Bidar- Gulbarga New railway project.

3. The South Central Railway vide their letter read at Sl.No.(6) above, have stated that an amount of Rs.50 crore is very much essential to finalise the above railway line. South Central Railway also provide 50 crores towards construction of new line is targeted during 2010-11 and have requested to take up these works at a fast pace. it is necessary that Government of Karnataka deposit at least 50.00 crore in the current year to meet the current liabilities and to call for additional tenders.

4. The request has been examined in detail and hence this order.

**GOVERNMENT ORDER NO: IDD 13 NSW 2008, BANGALORE DATED; 21.8.2010.**

After careful examination of the request of railways, Government of Karnataka is pleased to release an amount of 30.00 crores (Rupees Thirty crores only) towards the share of the State Government for the Bidar-Gulbarga new railway project.

2. The expenditure shall be met under the Head of Account 5465-01-190-3-10-(Plan)133-Bidar-Gulbarga Railway line-SDP project during 2010-11.

3. The Chief Executive Officer,K-RIDE is authorized to draw the amount on a payee's receipt duly countersigned by the under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts officer (Construction), South Central Railway, Secunderabad.

4. This order is issued with the concurrence of Finance Department vide U.O.Note.No. FD1368 EXP-1/2010 dated 11.08.2010.

By Order and in the name of the Governor of Karnataka
**C.A.Baburavindranath Patel**
Under Secretary to Government
Infrastructure Development Department

P.R. 2257

## ಆರ್ಥಿಕ ಸಚಿವಾಲಯ

**ವಿಷಯ :** **ಶ್ರೀ ಪಿ. ರಂಗಸ್ವಾಮಿ, ವಾಣಿಜ್ಯ ತೆರಿಗೆ, ಅಧಿಕಾರಿ, ಇವರ ವಿರುದ್ಧ ದಾಖಲಾದ 'ಅಕ್ರಮ ಆಸ್ತಿ ಹೊಂದಿರುವ' ಪ್ರಕರಣದ ಅಭಿಯೋಜನಾ ಆದೇಶದ ಮಂಜೂರಾತಿ ಕುರಿತು.**

**ಓದಲಾಗಿದೆ :**
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಬಿಡಿ–19/ಸಿಆರ್–9/2006/ಬಿಎಲ್‌ಆರ್, ದಿನಾಂಕ 04–05–2010.
2. ತನಿಖಾಧಿಕಾರಿಯವರ ಅಂತಿಮ ವರದಿ ದಿನಾಂಕ 16–04–2010.
3. ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.

ಪ್ರಸ್ತಾವನೆ:

ಶ್ರೀ ಪಿ. ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ಗುನ್ನೆ ಸಂಖ್ಯೆ: 09/2006 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು, ಇಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ,

ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ 04–05–2010 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19 ರಡಿಯಲ್ಲಿ ಮಂಜೂರಾತಿಗಾಗಿ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ). ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1)ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

I) ಪ್ರಥಮ ವರ್ತಮಾನ ವರದಿ ದಿನಾಂಕ: 07–06–2006.

II) ಶೋಧನಾ ಪಂಚನಾಮೆ

(1) ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲ್ಲೂಕು ಸರ್ಜಾಪುರ ಬಾಗಲೂರು ಮುಖ್ಯರಸ್ತೆಯಲ್ಲಿರುವ ಶ್ರೀ ಪಿ. ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಾಸದ ಮನೆ ದಿನಾಂಕ: 09–06–2006.

(2) ಲಯನ್ಸ್ ಪ್ಲೋರಿಟೆಕ್ ಪ್ರೈ. ಲಿ. ಫಾರ್ಮ್ ಹೌಸ್ ನಂ.88, ಎನ್.ಹೆಚ್.207, ಎಂ.ಸಿ. ಹಳ್ಳಿ, ಚಿಕ್ಕ ತಿರುಪತಿ ರಸ್ತೆ, ಸರ್ಜಾಪುರ ಅಂಚೆ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ, ದಿನಾಂಕ: 09–06–2006.

(3) ಬೆಂಗಳೂರು ನಗರ ಜಿಲ್ಲೆ ಸರ್ಜಾಪುರ ಹೋಬಳಿ, ಎಂ.ಸಿ. ಹಳ್ಳಿ ಗ್ರಾಮದಲ್ಲಿ ವಾಸವಾಗಿರುವ ಶ್ರೀ ಪಿ. ನಾಗರಾಜ್, ಶ್ರೀ ಪಿ. ವೆಂಕಟೇಶ್, ಶ್ರೀ ಪಾಪಣ್ಣರವರ ವಾಸದ ಮನೆ, ದಿನಾಂಕ: 09–06–2006.

(4) ವಾಣಿಜ್ಯ ತೆರಿಗೆ ಕಾರ್ಯಾಲಯ, ಕೋರಮಂಗಲದಲ್ಲಿರುವ ಶ್ರೀ ಪಿ. ರಂಗಸ್ವಾಮಿಯವರು ಕರ್ತವ್ಯ ನಿರ್ವಹಿಸುತ್ತಿರುವ ಕಛೇರಿ ದಿನಾಂಕ: 09–06–2006.

III) ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ: 16–04–2010.

IV) ತನಿಖೆಯ ಅಂತಿಮ ವರದಿಯ ಭಾಗಗಳಾದ ಈ ಕೆಳಕಂಡ ಕಡತಗಳು:–

**ಸಾಕ್ಷಿಗಳ ಹೇಳಿಕೆಗಳು:–**

1) ಶ್ರೀಮತಿ ಕೆ. ನಾಗಮ್ಮ, ದ್ವಿ.ದ.ಸ. ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಕೃಷಿ ಭವನ, ಬೆಂಗಳೂರು.
2) ಶ್ರೀಮತಿ ಕೆ. ರತ್ನಮ್ಮ, ಬೆರಳಚ್ಚುಗಾರರು, ಸಮಾಜ ಕಲ್ಯಾಣ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು.
3) ಶ್ರೀ ಎ. ನಾಗಯ್ಯ, ದ್ವಿ.ದ.ಸ. ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.
4) ಶ್ರೀ ಬಿ. ನಾರಾಯಣಪ್ಪ, ಪ್ರ.ದ.ಸ. ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿ.ವಿ. ಟವರ್, ಬೆಂಗಳೂರು.
5) ಶ್ರೀ ಬಿ.ಎಂ. ಅರುಣ್, ದ್ವಿ.ದ.ಸ. ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ವಿ.ವಿ. ಟವರ್, ಬೆಂಗಳೂರು.
6) ಶ್ರೀಮತಿ ಎಂ.ಎನ್. ಸುಜಾತ, ದ್ವಿ.ದ.ಸ. ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿ.ವಿ. ಟವರ್, ಬೆಂಗಳೂರು.
7) ಶ್ರೀಮತಿ ಜಿ. ಜಯಲಕ್ಷ್ಮಮ್ಮ, ದ್ವಿ.ದ.ಸ. ಜಿಲ್ಲಾ ಪಂಚಾಯತಿ, ಬೆಂಗಳೂರು ನಗರ ಜಿಲ್ಲೆ, ಕೃಷಿ ಭವನ, ಬೆಂಗಳೂರು.
8) ಶ್ರೀ ಎಂ.ಆರ್. ಜಯಪ್ರಕಾಶ್, ಪ್ರ.ದ.ಸ. ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ವಿ.ವಿ. ಟವರ್, ಬೆಂಗಳೂರು.

ಪರಿಶೀಲನಾ ಅವಧಿ ದಿನಾಂಕ: 01–01–1982 ರಿಂದ 09–06–2006 ರಲ್ಲಿ ಆರೋಪಿತರು ಮತ್ತು ಅವರ ಕುಟುಂಬ ವರ್ಗದವರು ಗಳಿಸಿರುವ ಸ್ಥಿರಾಸ್ತಿಗಳು

| ಕ್ರಮ ಸಂ. | ವಿವರ | ಮೊತ್ತ ರೂ.ಗಳಲ್ಲಿ | ಆಸ್ತಿಯು ಯಾರ ಹೆಸರಿನಲ್ಲಿದೆ |
|---|---|---|---|
| 1. | ನಿವೇಶನ ಸಂಖ್ಯೆ: 49, ಖಾತಾ ಸಂಖ್ಯೆ: 9 ವಿಸ್ತೀರ್ಣ 40X60 ಚ.ದ. ಅಂಬಲಿಪುರ, ವರ್ತೂರು ಹೋಬಳಿ, ಸರ್ಜಾಪುರ, ಬೆಂಗಳೂರು ದಕ್ಷಿಣ | 40,000–00 | ಆರೋಪಿ ಶ್ರೀ ಪಿ. ರಂಗಸ್ವಾಮಿ |
| 2. | ನಿವೇಶನ ಸಂಖ್ಯೆ: 6, ಖಾತಾ ಸಂಖ್ಯೆ: 46/50/6 ವಿಸ್ತೀರ್ಣ 35X40 ಚ.ದ. ವೆಂಕಟಪುರ ಗ್ರಾಮ, ಬೆಂಗಳೂರು ದಕ್ಷಿಣ ತಾಲ್ಲೂಕು. | 60,000–00 | ಆರೋಪಿ ಶ್ರೀ ಪಿ. ರಂಗಸ್ವಾಮಿ |
| 3. | ಸರ್ಜಾಪುರ ಹೋಬಳಿ, ಮಹಲ್ ಚೌಡದೇವಹಳ್ಳಿ ಗ್ರಾಮ ಖಾತಾ ಸಂಖ್ಯೆ: 497/491 62X25 ಅಡಿ ವಿಸ್ತೀರ್ಣದ ನಿವೇಶನ | 20,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 4. | ಸರ್ಜಾಪುರ ಹೋಬಳಿ, ಬಜಾರ್ ಸ್ಟ್ರೀಟ್, ಜಂಜರು ನಂ. 93 ಮತ್ತು ಆಸ್ತಿಯ ನಂ. 80 ರಲ್ಲಿ 49X38 ಅಡಿ ವಿಸ್ತೀರ್ಣದ ನಿವೇಶನ | 1,85,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 5. | ಎಂ.ಸಿ. ಹಳ್ಳಿ ಗ್ರಾಮದ ನಿವೇಶನ ಖಾತಾ ಸಂಖ್ಯೆ: 58 ವಿಸ್ತೀರ್ಣ 60X30 ಅಡಿ ವಿಸ್ತೀರ್ಣ | 5,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |

**ಜಮೀನುಗಳು:**

| | | | |
|---|---|---|---|
| 1. | ಸರ್ಜಾಪುರ ಹೋಬಳಿ, ಮಹಲ್ ಚೌಡದೇನಹಳ್ಳಿ ಗ್ರಾಮದ ಸರ್ವೇ ನಂ. 124/2 ರಲ್ಲಿ 25 ಗುಂಟೆ ಜಮೀನು | 2,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 2. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ. 152 ರಲ್ಲಿ 2 ಎಕರೆ ಜಮೀನು | 5,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |

| | | | |
|---|---|---|---|
| 3. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ. 152 ರಲ್ಲಿ 2 ಎಕರೆ 25 ಗುಂಟೆ ಜಮೀನು | 9,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 4. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ. 154/1 ರಲ್ಲಿ 2 ಎಕರೆ 1 ಗುಂಟೆ ಜಮೀನು | 5,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 5. | ಸರ್ಜಾಪುರ ಹೋಬಳಿ, ಎಂ.ಸಿ. ಹಳ್ಳಿ ಗ್ರಾಮದ ಸರ್ವೇ ನಂ.127/1 ರಲ್ಲಿ 34 1/2 ಗುಂಟೆ ಜಮೀನು | 3,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 6. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ. 154/2 ರಲ್ಲಿ26 ಗುಂಟೆ 154/3 ರಲ್ಲಿ 18 ಗುಂಟೆ ಮತ್ತು 154/05 ರಲ್ಲಿ 20 ಗುಂಟೆ ಜಮೀನು | 8,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 7. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ. 154/4 ರಲ್ಲಿ 18 ಗುಂಟೆ ಜಮೀನು | 2,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 8. | ವರ್ತೂರು ಹೋಬಳಿ ದೊಡ್ಡತಿಮ್ಮಸಂದ್ರ ಗ್ರಾಮದ ಸರ್ವೇ ನಂ. 69/3 ರಲ್ಲಿ 2 ಎಕರೆ 5 ಗುಂಟೆ ಜಮೀನು | 4,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 9. | ಸರ್ಜಾಪುರ ಹೋಬಳಿ, ಮಗಳೂರು ಗ್ರಾಮದ ಸರ್ವೇ ನಂ. 161/1 ರಲ್ಲಿ 2 ಎಕರೆ 24 ಗುಂಟೆ ಜಮೀನು<br>ಸದರಿ ಜಮೀನನ್ನು ದಿ: 24–08–1995 ರಂದು ಶ್ರೀಮತಿ ಅಶ್ವಿನಿ, ಆನೇಕಲ್ ತಾಲ್ಲೂಕು ಇವರಿಗೆ ರೂ. 1,85,000/–ಕ್ಕೆ ಮಾರಾಟ ಮಾಡಿರುತ್ತಾರೆ. | 30,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 10. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ. 164 ರಲ್ಲಿ 2 ಎಕರೆ ಜಮೀನು | 1,00,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 11. | ಸರ್ಜಾಪುರ ಹೋಬಳಿ, ಮಹಲ್ ಚೌಡದೇನಹಳ್ಳಿ ಗ್ರಾಮದ ಸರ್ವೇ ನಂ.88 ರಲ್ಲಿ 1 ಎಕರೆ 13 ಗುಂಟೆ ಜಮೀನು | 1,50,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 12. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ. 158 ರಲ್ಲಿ 1 ಎಕರೆ ಜಮೀನು | 1,05,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 13. | ಸರ್ಜಾಪುರ ಹೋಬಳಿ, ಎಂ.ಸಿ. ಹಳ್ಳಿ, ಗ್ರಾಮದ ಸರ್ವೇ ನಂ. 88 ರಲ್ಲಿ 2 ಎಕರೆ 4 ಗುಂಟೆ ಜಮೀನು | 2,10,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 14. | ಸರ್ಜಾಪುರ ಹೋಬಳಿ, ಬಿಳೇಕಲ್ಲು ಗ್ರಾಮದ ಸರ್ವೇ ನಂ. 66 ರಲ್ಲಿ 11 ಗುಂಟೆ ಜಮೀನು | 2,00,000–00 | ಆರೋಪಿತರ ಮಗ ಶ್ರೀ ಸಿ.ಆರ್. ಮನೋಹರ್ |
| 15. | ಸರ್ಜಾಪುರ ಹೋಬಳಿ, ಎಂ.ಸಿ. ಹಳ್ಳಿ ಗ್ರಾಮದ ಸರ್ವೇ ನಂ. 89 ರಲ್ಲಿ 2 ಎಕರೆ 32 ಗುಂಟೆ ಜಮೀನು | 2,10,000–00 | ಆರೋಪಿತರ ಮಗ ಶ್ರೀ ಸಿ.ಆರ್. ಮನೋಹರ್ |
| 16. | ಸರ್ಜಾಪುರ ಹೋಬಳಿ, ಸರ್ಜಾಪುರ ಗ್ರಾಮದ ಸರ್ವೇ ನಂ. 13/ಎ ರಲ್ಲಿ ಮತ್ತು 13/2 ಬಿ, 14/1 ಒಟ್ಟು 21.8 ಗುಂಟೆ ಜಮೀನು | 1,34,500–00 | ಆರೋಪಿತರ ಮಗ ಶ್ರೀ ಸಿ.ಆರ್. ಮನೋಹರ್ |
| 17. | ಸರ್ಜಾಪುರ ಹೋಬಳಿ, ದೊಡ್ಡ ತಿಮ್ಮಸಂದ್ರ ಗ್ರಾಮದ ಸರ್ವೇ ನಂ. 126/2 ರಲ್ಲಿ ಮತ್ತು 28 ಗುಂಟೆ ಜಮೀನು | 67,500–00 | ಆರೋಪಿತರ ಮಗ ಶ್ರೀ ಸಿ.ಆರ್. ಮನೋಹರ್ |

**ಮನೆಗಳು:**

| | | | |
|---|---|---|---|
| 1. | ತಾವರೆ ಕೆರೆ ಗ್ರಾಮದ ನಿವೇಶನ ಸಂಖ್ಯೆ: 12 ಖಾತಾ ನಂ. 9/1 (40X70 ರಲ್ಲಿ ವಿಸ್ತೀರ್ಣ) ಖರೀದಿಸಿರುವ ಮನೆ<br>ಸದರಿ ಮನೆಯನ್ನು ದಿ: 29–07–2004 ರಂದು ಶ್ರೀಮತಿ ಉಮಾದೇವಿ ಇವರಿಗೆ ರೂ. 10,16,300/–ಕ್ಕೆ ಮಾರಾಟ ಮಾಡಿರುತ್ತಾರೆ. | 1,92,000–00 | ಆರೋಪಿತರ ತಂದೆ ಶ್ರೀ ಪಾಪಣ್ಣ |
| 2. | ಬಾಗಲೂರು ರಸ್ತೆ, ಸರ್ಜಾಪುರ ಬೆಂಗಳೂರು ಗ್ರಾಮದ ಸರ್ವೇ ನಂ. 13/2ಎ, 13/2ಬಿ, 14/1 ಮತ್ತು 21/8 ರಲ್ಲಿರುವ ಮನೆ | 35,75,000–00 | ಆರೋಪಿ ಶ್ರೀ ಪಿ. ರಂಗಸ್ವಾಮಿ |
| 3. | ಮಹಲ್ ಚೌಡದೇನಹಳ್ಳಿ, ಸರ್ಜಾಪುರದ ಮನೆ ನವೀಕರಣ | 1,37,000–00 | ಆರೋಪಿ ಶ್ರೀ ಪಿ. ರಂಗಸ್ವಾಮಿ |
| 4. | ಎಂ.ಸಿ. ಹಳ್ಳಿ, ಸರ್ವೇ ನಂ. 89 ರಲ್ಲಿ ನಿರ್ಮಿಸಿರುವ ಫಾರ್ಮ್‌ಹೌಸ್ | 1,83,000–00 | ಆರೋಪಿ ಶ್ರೀ. ಪಿ. ರಂಗಸ್ವಾಮಿ |
| 5. | ಎಂ.ಸಿ. ಹಳ್ಳಿ, ಸರ್ವೇ ನಂ. 88, 89 ರಲ್ಲಿ ನಿರ್ಮಿಸಿರುವ ನೀರು ಸಂಗ್ರಹಣಾ ಟ್ಯಾಂಕ್‌ಗಳ ನಿರ್ಮಾಣ. | 1,40,000–00 | ಆರೋಪಿ ಶ್ರೀ ಪಿ. ರಂಗಸ್ವಾಮಿ |

**ಬ್ಯಾಂಕ್ ಖಾತೆಗಳು:**

| | | | |
|---|---|---|---|
| 1. | ಆಂಧ್ರ ಬ್ಯಾಂಕ್, ಬೆಂಗಳೂರು ಶಾಖೆ, ಎಸ್.ಬಿ. ಖಾತೆ ಸಂಖ್ಯೆ: 002401100112321 | 56,993–00 | ಆರೋಪಿ ಶ್ರೀ ಪಿ. ರಂಗಸ್ವಾಮಿ |
| 2. | ಐ.ಎನ್.ಜಿ. ವೈಶ್ಯ ಬ್ಯಾಂಕ್, ಬೆಂಗಳೂರು ಎಸ್.ಬಿ. ಖಾತೆ ಸಂಖ್ಯೆ: 160010056198 | 1,903–00 | ಆರೋಪಿತರ ಮಗ ಶ್ರೀ ಸಿ.ಆರ್. ಮನೋಹರ್ |
| 3. | ಐ.ಸಿ.ಐ.ಸಿಐ. ಬ್ಯಾಂಕ್, ಕೋರಮಂಗಲ, ಬೆಂಗಳೂರು ಸಿ.ಎ. ಅಕೌಂಟ್ ನಂ. 004705004474 | 3,80,387–00 | ಆರೋಪಿತರ ಮಗ ಶ್ರೀ ಸಿ.ಆರ್. ಮನೋಹರ್ |
| 4. | ಐ.ಸಿ.ಐ.ಸಿ.ಐ. ಬ್ಯಾಂಕ್ ಕೋರಮಂಗಲ, ಬೆಂಗಳೂರು ಸಿ.ಎ. ಅಕೌಂಟ್ ನಂ. 004705002557 | 2,03,472–00 | ಆರೋಪಿತರ ಮಗ ಶ್ರೀ ಸಿ.ಆರ್. ಮನೋಹರ್ |

**ವ್ಯಾಪಾರಿ ಸಂಸ್ಥೆಗಳು:**

| | | | |
|---|---|---|---|
| 1. | ಸರ್ಜಾಪುರ, ಬೆಂಗಳೂರು, ಸರ್ವೇ ನಂ. 88 ಮತ್ತು 89 ರಲ್ಲಿ ಪ್ರಾರಂಭಿಸಿರುವ ಮೆ: ಲಯನ್ಸ್ ಪ್ಲೋರಾ–1 ಸಂಸ್ಥೆ | 1,14,66,000–00 ಬಂಡವಾಳ | ಆರೋಪಿತರ ತಂದೆ ಶ್ರೀ ಪಾಪಣ್ಣ, ಆರೋಪಿತರ ಮಕ್ಕಳಾದ ಶ್ರೀ ಸಿ.ಆರ್. ಮನೋಹರ್, ಶ್ರೀಮತಿ ಸಿ.ಆರ್. ಶೈಲಾ ಮತ್ತು ಶ್ರೀ ಸಿ.ಆರ್. ಗೋಪಿ |
| 2. | ಸರ್ಜಾಪುರ, ಬೆಂಗಳೂರು, ಸರ್ವೇ ನಂ. 88 ಮತ್ತು 89 ರಲ್ಲಿ ಪ್ರಾರಂಭಿಸಿರುವ ಮೆ: ಲಯನ್ಸ್ ಪ್ಲೋರಾ–2 ಸಂಸ್ಥೆ | 22,58,000–00 ಬಂಡವಾಳ | ಆರೋಪಿತರ ತಂದೆ ಶ್ರೀ ಪಾಪಣ್ಣ, ಆರೋಪಿತರ ಮಕ್ಕಳಾದ ಶ್ರೀ ಸಿ.ಆರ್. ಮನೋಹರ್, ಶ್ರೀಮತಿ ಸಿ.ಆರ್. ಶೈಲಾ ಮತ್ತು ಶ್ರೀ. ಸಿ.ಆರ್. ಗೋಪಿ |
| 3. | ಸರ್ಜಾಪುರ, ಬೆಂಗಳೂರು, ಸರ್ವೇ ನಂ. 88 ಮತ್ತು 152 ರಲ್ಲಿ ಪ್ರಾರಂಭಿಸಿರುವ ಮೆ: ಬಾಲಾಜಿ ಪ್ಲೋರಾ ಸಂಸ್ಥೆ | 1,28,26,000–00 ಬಂಡವಾಳ | ಆರೋಪಿತರ ಮಗ ಶ್ರೀ ಸಿ.ಆರ್. ಗೋಪಿ, ಶ್ರೀ ನಾಗರಾಜ್ |

**ಆರೋಪಿತರು ಮತ್ತು ಅವರ ಕುಟುಂಬದ ಹೆಸರಿನಲ್ಲಿರುವ ವಾಹನಗಳು:**

| | | | |
|---|---|---|---|
| 1. | ಮೆ: ಲಯನ್ಸ್ ಪ್ಲೋರಾ ಸಂಸ್ಥೆ ಹೆಸರಿನಲ್ಲಿ ಖರೀದಿಸಿರುವ ಸ್ಕೋಡಾ ರೈಡರ್ ಕಾರು ನಂ. ಕೆಎ–53 ಎಂ–2367 | 11,16,698–00 | ಮೆ: ಲಯನ್ಸ್ ಪ್ಲೋರಾ ಸಂಸ್ಥೆ ಹೆಸರಿನಲ್ಲಿ |
| 2. | ಮೆ: ಲಯನ್ಸ್ ಪ್ಲೋರಾ ಸಂಸ್ಥೆ ಹೆಸರಿನಲ್ಲಿ ಖರೀದಿಸಿರುವ ಹೊಂಡೈ ಆಕ್ಸೆಂಟ್ ಕಾರು ನಂ. ಕೆಎ–05 ಎಂಇ–2367 | 7,10,415–00 | ಮೆ: ಲಯನ್ಸ್ ಪ್ಲೋರಾ ಸಂಸ್ಥೆ ಹೆಸರಿನಲ್ಲಿ |
| 3. | ಮೆ: ಲಯನ್ಸ್ ಎಸ್ಟೇಟ್ ಸಂಸ್ಥೆ ಹೆಸರಿನಲ್ಲಿ ಖರೀದಿಸಿರುವ ಮಹೇಂದ್ರ ಸ್ಕಾರ್‌ಪಿಯೋ ವಾಹನ ಸಂಖ್ಯೆ: ಕೆಎ01 ಎಂಆರ್–2367 | 7,58,067–00 | ಮೆ: ಲಯನ್ಸ್ ಎಸ್ಟೇಟ್ ಸಂಸ್ಥೆ |
| 4. | ಹುಂಡೈ ಗೆಟ್ಸ್ ಕಾರು ನಂ. ಕೆಎ–51 ಎಂ–1168 | 4,52,009–99 | ಆರೋಪಿತರ ಮಗ ಶ್ರೀ ಸಿ.ಆರ್. ಮನೋಹರ್ |
| 5. | ಮಾರುತಿ ಓಮ್ನಿ ವ್ಯಾನ್ ನಂ. ಕೆಎ–01 ಎಂಬಿ–2747 ಮೆ: ಲಯನ್ಸ್ ಪ್ಲೋರಾ ಸಂಸ್ಥೆ | 2,50,497–00 | ಮೆ: ಲಯನ್ಸ್ ಪ್ಲೋರಾ ಸಂಸ್ಥೆ |
| 6. | ಟೊಯೊಟಾ ಕ್ವಾಲಿಸ್ ವಾಹನ ನಂ. ಕೆಎ–08 ಎಂ–5565 | 3,40,000–00 | ಆರೋಪಿತರ ಮಗ ಶ್ರೀ ಸಿ.ಆರ್. ಮನೋಹರ್ |
| 7. | ಶೋಧನಾ ಪಂಚನಾಮೆಯಲ್ಲಿ ಕಂಡುಬಂದ ನಗದು ಹಣ | 2,26,300–00 | |
| 8. | ಆಪಾದಿತರ ಮನೆ ಶೋಧನಾ ಪಂಚನಾಮೆಯಲ್ಲಿ ಕಂಡುಬಂದ ಚಿನ್ನಾಭರಣಗಳು ಒಟ್ಟು 617 ಗ್ರಾಂ | 1,25,000–00 | |
| 9. | ಶೋಧನಾ ಪಂಚನಾಮೆಯಲ್ಲಿ ಕಂಡಬಂದ ಗೃಹೋಪಯೋಗಿ ವಸ್ತುಗಳ ಮೌಲ್ಯ ಒಟ್ಟು | 4,68,120–00 | |

**ಆರೋಪಿತ ಅಧಿಕಾರಿಯಾದ ಶ್ರೀ ಪಿ. ರಂಗಸ್ವಾಮಿ ಮತ್ತು ಅವರ ಕುಟುಂಬದ ಹೆಸರಿನಲ್ಲಿರುವ ಆದಾಯದ ವಿವರಗಳು:**

| | | | |
|---|---|---|---|
| 1. | ಶ್ರೀ ಪಿ. ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿಯವರು ಪರಿಶೀಲನಾ ಅವಧಿಯಲ್ಲಿ ಪಡೆದಿರುವ ನಿವ್ವಳ ವೇತನದ ಆದಾಯ ದಿನಾಂಕ: 12–10–1981 ರಿಂದ 31–05–2006 ರವರೆಗೆ | 16,93,122–00 | ಆರೋಪಿತ ಅಧಿಕಾರಿ ಶ್ರೀ ಪಿ. ರಂಗಸ್ವಾಮಿ |
| 2. | ಜಿ.ಪಿ.ಎಫ್. ಖಾತೆ ಸಂಖ್ಯೆ: 3694 ರಿಂದ ಪಡೆದಿರುವ ಮುಂಗಡ | 68,000–00 | ಆರೋಪಿತ ಅಧಿಕಾರಿ ಶ್ರೀ ಪಿ. ರಂಗಸ್ವಾಮಿ |

| | | | |
|---|---|---|---|
| 3. | ಜಿ.ಪಿ.ಎಫ್. ಖಾತೆ ಸಂಖ್ಯೆ: 3694 ರಿಂದ ಪಡೆದಿರುವ ಭಾಗಶಃ ಹಿಂಪಡೆತ | 2,60,000–00 | ಆರೋಪಿತ ಅಧಿಕಾರಿ ಶ್ರೀ. ಪಿ. ರಂಗಸ್ವಾಮಿ |
| 4. | ಎಲ್.ಐ.ಸಿ. ಪಾಲಿಸಿ ಸಂಖ್ಯೆ: 610338900 ನ್ನು ಸರೆಂಡರ್ ಮಾಡಿರುವುದರಿಂದ ಬಂದಿರುವ ಆದಾಯ | 8,994–00 | ಆರೋಪಿತ ಅಧಿಕಾರಿ ಶ್ರೀ ಪಿ. ರಂಗಸ್ವಾಮಿ |
| 5. | ಮನೆ ನಂ. 80/93, ಬಜಾರ್ ಸ್ಟ್ರೀಟ್, ಸರ್ಜಾಪುರ, ಬೆಂಗಳೂರು ಇವರ ಬಾಡಿಗೆಯಿಂದ ಬಂದ ಆದಾಯ | 1,92,800–00 | ಆರೋಪಿತ ಅಧಿಕಾರಿಯವರ ತಂದೆ ಶ್ರೀ ಪಾಪಣ್ಣನವರ ಹೆಸರಿನಲ್ಲಿ |
| 6. | ಆರೋಪಿತರು ಬೇನಾಮಿಯಾಗಿ ಹಾಗೂ ತನ್ನ ಕುಟುಂಬದ ಸದಸ್ಯರುಗಳು ಜಮೀನುಗಳಿಂದ ಗಳಿಸಿರುವ ಕೃಷಿ ಹಾಗೂ ತೋಟಗಾರಿಕೆ ಬೆಳೆಗಳ ಒಟ್ಟು ಆದಾಯ | 1,04,107–00 | |

ಶ್ರೀ ಪಿ. ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಮೊಬೈಲ್ ಚೆಕ್‌ಪೋಸ್ಟ್, ಕೋರಮಂಗಲ, ಬೆಂಗಳೂರುರವರು ತಮ್ಮ ಎಲ್ಲಾ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿದುಬಂದ ವಿಶ್ವಾಸಾರ್ಹ ಮಾಹಿತಿಯನ್ವಯ ಸದರಿ ಆಪಾದಿತರ ವಿರುದ್ಧ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆರವರು ದಿನಾಂಕ: 08–06–2006 ರಂದು ಅಧಿಕೃತ ತನಿಖಾಧಿಕಾರದ ಆದೇಶವನ್ನು ಪಡೆದು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ (13(1)(ಇ) ಜೊತೆಯಲ್ಲಿ ಓದಲಾದ 13(2) ರಡಿಯಲ್ಲಿ ಮೊಕದ್ದಮೆ ಸಂಖ್ಯೆ: 9/2006 ರಲ್ಲಿ ಪ್ರಕರಣವನ್ನು ದಾಖಲು ಮಾಡಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಜಿಲ್ಲಾ ವಿಶೇಷ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆರವರಿಂದ ದಿನಾಂಕ: 08–06–2006 ರಂದು ಶೋಧನಾ ಆದೇಶವನ್ನು ಪಡೆದು ಸದರಿ ಆರೋಪಿತ ಸರ್ಕಾರಿ ಅಧಿಕಾರಿಗೆ ಸೇರಿದ ಆರೋಪಿತರ ನಿವಾಸದ ಮೇಲೆ ಮತ್ತು ಕಛೇರಿಯ ಮೇಲೆ ದಿನಾಂಕ: 09–06–2006 ರಂದು ಧಾಳಿ ಮಾಡಿ ಶೋಧಿಸಿದಾಗ, ಕಂಡುಬಂದ ಚರ ಮತ್ತು ಸ್ಥಿರಾಸ್ತಿ, ಗೃಹೋಪಯೋಗಿ ಉಪಕರಣಗಳು, ಚಿನ್ನ ಮತ್ತು ಬೆಳ್ಳಿ, ಬ್ಯಾಂಕ್ ಡೆಪಾಸಿಟ್‌ಗಳು ಮತ್ತು ನಗದು ಹಣ, ಎಲೆಕ್ಟ್ರಾನಿಕ್ ವಸ್ತುಗಳು, ವಾಹನಗಳು ಜೀವವಿಮೆ ಪಾಲಿಸಿಗಳು ಮತ್ತು ಖಾಲಿ ನಿವೇಶನಗಳು ಹಾಗೂ ಜಮೀನುಗಳು ಇವುಗಳನ್ನೊಳಗೊಂಡ ಆಸ್ತಿಗಳು ಮತ್ತು ಇವುಗಳಿಗೆ ಸಂಬಂಧಿಸಿದ ದಾಖಲಾತಿಗಳು ಸೇರಿದಂತೆ ಒಂದು ವಿವರವಾದ ಪಂಚನಾಮೆಯನ್ನು ಲೋಕಾಯುಕ್ತ ಪೊಲೀಸರು ಮಾಡಿರುತ್ತಾರೆ.

ತನಿಖೆಯ ಉದ್ದೇಶಕ್ಕಾಗಿ ಪರಿಶೀಲನಾ ಅವಧಿಯನ್ನು 01–01–1982 ರಿಂದ ದಿನಾಂಕ: 09–06–2006 ರವರೆಗೆ ನಿಗಧಿಪಡಿಸಲಾಗಿದೆ. ತನಿಖೆಯು ಪೂರ್ಣಗೊಂಡ ನಂತರ ಆಪಾದಿತರ ಮತ್ತು ಅವರ ಕುಟುಂಬ ವರ್ಗದವರ ವಶದಲ್ಲಿದ್ದ ಒಟ್ಟು ಆಸ್ತಿ, ಖರ್ಚು ಮತ್ತು ಆದಾಯಗಳ ಒಟ್ಟು ಮೊತ್ತವು ಈ ಕೆಳಕಂಡಂತೆ ಇರುತ್ತದೆ.

| ಕ್ರಮ ಸಂಖ್ಯೆ | ವಿವರಗಳು | ಮೌಲ್ಯ |
|---|---|---|
| 1. | ಆಪಾದಿತರು ಪರಿಶೀಲನಾ ಅವಧಿಯಲ್ಲಿ ಹೊಂದಿರುವ ಆಸ್ತಿಗಳ ಒಟ್ಟು ಮೊತ್ತ | 3,74,85,956–00 |
| 2. | ಆಪಾದಿತರು ಪರಿಶೀಲನಾ ಅವಧಿಯಲ್ಲಿ ಮಾಡಿರುವ ಖರ್ಚುಗಳ ಒಟ್ಟು ಮೊತ್ತ | 98,11,707–00 |
| 3. | ಆಪಾದಿತರು ಪರಿಶೀಲನಾ ಅವಧಿಯಲ್ಲಿ ಹೊಂದಿರುವ ಆಸ್ತಿ ಮತ್ತು ಖರ್ಚುಗಳ ಒಟ್ಟು ಮೊತ್ತ | 4,72,97,663–00 |
| 4. | ಆಪಾದಿತರು ಪರಿಶೀಲನಾ ಅವಧಿಯಲ್ಲಿ ಗಳಿಸಿರುವ ಆದಾಯದ ಒಟ್ಟು ಮೊತ್ತ | 1,99,92,123–00 |
| 5. | ಆಪಾದಿತ ಅಧಿಕಾರಿಯು ತಮ್ಮ ಗೊತ್ತಾದ ಆದಾಯಕ್ಕಿಂತಲೂ ಹೆಚ್ಚುವರಿಯಾಗಿ ಹೊಂದಿರುವ ಆಸ್ತಿಗಳ ಒಟ್ಟು ಮೌಲ್ಯ | 2,73,05,540–00 |
| 6. | ಅಸಮತೋಲನ ಪ್ರಮಾಣದ ಆಸ್ತಿಗಳ ಶೇಕಡವಾರು | 136.58% |

ಮೇಲ್ಕಂಡ ವಿವರಗಳಿಂದ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಪಿ. ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಮೊಬೈಲ್ ಚೆಕ್‌ಪೋಸ್ಟ್, ಕೋರಮಂಗಲ, ಬೆಂಗಳೂರುರವರು ತಮ್ಮ ಎಲ್ಲಾ ಮೂಲ ಆದಾಯಕ್ಕಿಂತ ರೂ. 2,73,05,540–00 ಅಂದರೆ ಶೇಕಡ 136.58% ರಷ್ಟು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂಬುದು ತನಿಖೆಯಿಂದ ಕಂಡುಬಂದಿದ್ದು, ಆಪಾದಿತರು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 13(1)(ಇ) ಸಹವಾಚನ 13(2) ರಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಆದಕಾರಣ, ಆಪಾದಿತರನ್ನು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 13(1)(ಇ) ಸಹವಾಚನ 13(2) ರಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸಾಕ್ಷಿ ಪುರಾವೆಗಳು ಲಭ್ಯವಿರುತ್ತದೆಂದು ಲೋಕಾಯುಕ್ತ ಪೊಲೀಸರು ತಿಳಿಸಿರುತ್ತಾರೆ.

ಆದ್ದರಿಂದ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಆಪಾದಿತ ಅಧಿಕಾರಿಯಾದ ಶ್ರೀ ಪಿ. ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಮೊಬೈಲ್ ಚೆಕ್‌ಪೋಸ್ಟ್, ಕೋರಮಂಗಲ, ಬೆಂಗಳೂರುರವರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡುವಂತೆ ಅಪರ ಪೊಲೀಸ್ ಮಹಾನಿರ್ದೇಶಕರು ಕೋರಿರುತ್ತಾರೆ.

ಆರೋಪಿತ ಅಧಿಕಾರಿಯು ತನ್ನ ಸರ್ಕಾರಿ ಸೇವಾವಧಿಯಲ್ಲಿ ಅಕ್ರಮ ಮಾರ್ಗಗಳನ್ನು ಅನುಸರಿಸಿ ತನ್ನ ಬಲ್ಲ ಮೂಲಗಳ ಆದಾಯಕ್ಕಿಂತ ರೂ. 2,73,05,540/– ರಷ್ಟು ಅಸಮತೋಲನ ಪ್ರಮಾಣದ ಆಸ್ತಿಗಳನ್ನು ಹೊಂದಿರುವುದು ದೃಢಪಟ್ಟಿದ್ದು, ಇದರಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಪ್ರಕಾರ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ದೃಢಪಟ್ಟಿರುತ್ತದೆ. ಆರೋಪಿತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ವಿಪುಲವಾದ ಸಾಕ್ಷ್ಯಾಧಾರಗಳಿರುತ್ತದೆ ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 13 ವಾತೆತ 2007 ಬೆಂಗಳೂರು, ದಿನಾಂಕ: 17–08–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಪಿ. ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ವಾಣಿಜ್ಯ ಇಲಾಖೆ, ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಲಂಚ ನಿರೋಧಕ ಕಾಯ್ದೆ 13(1)(ಇ) ಜೊತೆಯಲ್ಲಿ ಕಲಂ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ನಿಯಮ–19 ರನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 17–08–2009 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2192

**ಎಂ.ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಜೋಗಯ್ಯ, ಕೆಎಎಸ್ (ಕಿರಿಯ ಶ್ರೇಣಿ) (ನಿವೃತ್ತ) ಅಧಿಕಾರಿ, ಅಂದಿನ ತಹಶೀಲ್ದಾರ್, ಶ್ರೀ ವಿ.ಸಿ. ಇನಾಂದಾರ್ ಅಂದಿನ ಹಕ್ಕುದಾಖಲೆ ಶಿರಸ್ತೇದಾರ್, ಶ್ರೀ ಐ.ಕೆ. ತಟಗಾರ್, ಅಂದಿನ ಗ್ರಾಮ ಲೆಕ್ಕಿಗರು, ಶ್ರೀಮತಿ ಎಂ. ಲೀಲಾವತಿ, ಅಂದಿನ ದ್ವಿತೀಯ ದರ್ಜೆ ಸಹಾಯಕರು, ಶ್ರೀ ಸುನೀಲ್ ಕುಮಾರ್, ಅಂದಿನ ದ್ವಿತೀಯ ದರ್ಜೆ ಭೂ ಮಾಪಕರು ಮತ್ತು ಶ್ರೀ ಡಿ.ಎಂ. ಆಂಜಿನಪ್ಪ, ಅಂದಿನ ದ್ವಿತೀಯ ದರ್ಜೆ ಭೂ ಮಾಪಕರು ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ – ಇವರುಗಳ ವಿರುದ್ಧ ಜಂಟೀ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ :**
1. ದಿನಾಂಕ: 17–01–08ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 260 ಕೆಇವಿ 07
2. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ: 27–11–09.
3. ದಿನಾಂಕ: 08–12–10ರ ನೋಟೀಸು ಸಂಖ್ಯೆ: ಸಿಆಸುಇ 260 ಕೆಇವಿ 07.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಜೋಗಯ್ಯ, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕಿನ ತಹಶೀಲ್ದಾರರ ಹುದ್ದೆಯಲ್ಲಿ ಶ್ರೀ ವಿ.ಸಿ. ಇನಾಂದಾರ್‌ರವರು ಹಕ್ಕುದಾಖಲೆ ಶಿರಸ್ತೇದಾರರ ಹುದ್ದೆಯಲ್ಲಿ, ಶ್ರೀ ಐ.ಕೆ. ತಟಗಾರ್, ದೊಡ್ಡಹುಲ್ಲೂರು ವೃತ್ತದ ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ ಶ್ರೀಮತಿ ಎಂ. ಲೀಲಾವತಿ, ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ. ಶ್ರೀ ಸುನೀಲ್ ಕುಮಾರ್, ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಯಲ್ಲಿ ಮತ್ತು ಶ್ರೀ ಡಿ.ಎಂ. ಆಂಜಿನಪ್ಪ, ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರುಗಳ ವಿರುದ್ಧ ಹೊಸಕೋಟೆ ತಾಲ್ಲೂಕು, ಕಸಬಾ ಹೋಬಳಿ, ಚಿಕ್ಕಹುಲ್ಲೂರು ಗ್ರಾಮದ ಸರ್ಕಾರಿ ಜಮೀನು ಸರ್ವೆ ನಂ. 25 ರಲ್ಲಿ ಒಟ್ಟು 17 ಜನರಿಗೆ ಖೋಟಾ (Bogus) ಸಾಗುವಳಿ ಚೀಟಿ ಆಧಾರದ ಮೇಲೆ ಮಂಜೂರು ಮಾಡಲಾಗಿದೆ ಎನ್ನುವ ಸೃಷ್ಠಿತ ಕಡತದ ಆಧಾರದ ಮೇಲೆ ಪೋಡಿ ದುರಸ್ತಿಪಡಿಸಿ, ಹೊಸ ಸರ್ವೆ ನಂ. 54 ರಿಂದ 70 ಎಂದು ಒಟ್ಟು 17 ಜನರ ಹೆಸರಿಗೆ 58–00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಸಿರುವ ಆರೋಪದ ಸಂಬಂಧ ಸದರಿ ನಿವೃತ್ತ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಿ, ಜಂಟೀ ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು, ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರುರವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ವಿಚಾರಣಾಧಿಕರಿಗಳು ಸಲ್ಲಿಸಿದ ವಿಚಾರಣಾ ವರದಿಯಂತೆ, (1) ಶ್ರೀ ಜೋಗಯ್ಯ, ತಹಶೀಲ್ದಾರ್‌ರವರು ಒಬ್ಬರ ಪೋಡಿ ದುರಸ್ತಿಗಾಗಿ ಸಹಾಯಕ ನಿರ್ದೇಶಕರು, ಭೂ ಮಾಪನ ಇಲಾಖೆ (Assistant Director of Land Records (ADLR) ಇವರಿಗೆ ಕಳುಹಿಸಿದ ಕಡತವು ಹಿಂತಿರುಗಿ ಬಂದಾಗ ಒಬ್ಬರ ಹೆಸರಿನ ಬದಲಿಗೆ ಇತರೇ ಒಟ್ಟು 17 ಜನರ ಹೆಸರಿಗೆ ಪೋಡಿ ದುರಸ್ತಿಯಾಗಿರುವುದನ್ನು ಪರಿಶೀಲಿಸಿರುವುದಿಲ್ಲ ಮತ್ತು ಮ್ಯುಟೇಷನ್ ಅಂಗೀಕರಿಸುವಾಗ ಚೆಕ್ ರಿಜಿಸ್ಟರಿನಲ್ಲಿ ಗ್ರಾಮ ಲೆಕ್ಕಿಗರು ಮಾಡಿರುವ ನಮೂದುಗಳನ್ನು ಮಂಜೂರಾತಿ ದಾಖಲೆಗಳೊಂದಿಗೆ ಪರಿಶೀಲಿಸಿ ಆದೇಶ ಮಾಡಬೇಕಿತ್ತು. ಆದರೆ ಇವರು ಈ ರೀತಿ ಮಾಡಿಲ್ಲದ ಕಾರಣ, ಒಟ್ಟು 17 ಜನರ ಹೆಸರಿಗೆ 58–00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಗೊಳ್ಳಲು ಕಾರಣಕರ್ತರಾಗಿದ್ದು, ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ, (2) ಶ್ರೀ ಇನಾಂದಾರ್, ಹಕ್ಕು ದಾಖಲೆ ಶಿರಸ್ತೇದಾರ್ ಇವರು ಪೋಡಿ ದುರಸ್ತಿಗಾಗಿ ಸಲ್ಲಿಸಿದ ಅರ್ಜಿಯನ್ನು ಕೂಲಕಂಷವಾಗಿ ಪರಿಶೀಲಿಸಿದೆ ವಿಷಯ ನಿರ್ವಾಹಕರ ಪ್ರಸ್ತಾವನೆಯನ್ನು ಕಛೇರಿ ಕಾರ್ಯವಿಧಾನದಂತೆ ತಹಶೀಲ್ದಾರರಿಗೆ ಮಂಡಿಸದೇ, ಅರ್ಜಿಯೊಂದಿಗೆ ಅಗತ್ಯ ದಾಖಲೆಗಳು ಇದ್ದವೇ, ಇದ್ದಲ್ಲಿ ಅದರ ನೈಜತೆ ಇತ್ಯಾದಿಗಳನ್ನು ಪರಿಶೀಲಿಸದೇ ತಮ್ಮ ಹಂತದಲ್ಲಿಯೇ ಅರ್ಜಿಯನ್ನು ADLR ರವರಿಗೆ ರವಾನಿಸುವ ಮೂಲಕ ಒಟ್ಟು 17 ಜನರ ಹೆಸರಿಗೆ 58–00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಗೊಳ್ಳಲು ಕಾರಣಕರ್ತರಾಗಿದ್ದು, ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (3) ಶ್ರೀ ತಟಗಾರ್, ಗ್ರಾಮ ಲೆಕ್ಕಗರು ಇವರು ಮ್ಯುಟೇಶನ್ ಅಂಗೀಕರಿಸುವ ಪೂರ್ವದಲ್ಲಿ ಯಾವುದೇ ಪ್ರಕರಣದ ಪೂರ್ವಾಪರಗಳನ್ನು ಹಾಗೂ ಮೂಲ ದಾಖಲೆಗಳನ್ನು ಸಮಗ್ರವಾಗಿ ಪರಿಶೀಲಿಸಬೇಕು. ಆದರೆ ಇವರು ಈ ರೀತಿ ಮಾಡಿಲ್ಲದ ಕಾರಣ ಒಟ್ಟು 17 ಜನರ ಹೆಸರಿಗೆ 58–00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಗೊಳ್ಳಲು ಕಾರಣಕರ್ತರಾಗಿದ್ದು, ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (4) ಶ್ರೀಮತಿ ಲೀಲಾವತಿ, ದ್ವಿತೀಯ ದರ್ಜೆ ಸಹಾಯಕಿ ಇವರು ಪೋಡಿ ದುರಸ್ತಿಗಾಗಿ ಬಂದ ಅರ್ಜಿಯನ್ನು ಕಛೇರಿ ಕಾರ್ಯವಿಧಾನದಂತೆ ಮಂಡಿಸದೇ, ಶಿರಸ್ತೇದಾರರ ಹಂತದಲ್ಲಿಯೇ ಅರ್ಜಿಯ ಮೇಲೆ ಸಹಿ ಪಡೆದು ADLR ರವರಿಗೆ ರವಾನಿಸುವ ಮೂಲಕ

ಕರ್ತವ್ಯವಿಮುಖತೆಯನ್ನು ತೋರಿದ್ದು, ಒಟ್ಟು 17 ಜನರ ಹೆಸರಿಗೆ 58-00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಗೊಳ್ಳಲು ಕಾರಣಕರ್ತರಾಗಿದ್ದು, ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (5) ಶ್ರೀ ಸುನೀಲ್ ಕುಮಾರ್, ದ್ವಿತೀಯ ದರ್ಜೆ ಭೂಮಾಪಕರು ಇವರು ತಹಶೀಲ್ದಾರರ ಕಛೇರಿಯಿಂದ ರವಾನಿಸಲಾದ ಒಬ್ಬರ ಪೋಡಿ ದುರಸ್ತಿಯ ಅರ್ಜಿಯ ಜೊತೆಗೆ ಇತರೇ ಯಾವುದೇ ಅಗತ್ಯ ಮೂಲ ದಾಖಲೆಗಳು ಇಲ್ಲದಿರುವ ಬಗ್ಗೆ ಗಮನಿಸಬೇಕಿತ್ತು. ತಾಲ್ಲೂಕು ಕಛೇರಿಯಿಂದ ಯಾವುದೇ ದಾಖಲೆಗಳು ಉಲ್ಲೇಖಿಸಲ್ಪಡದೇ ಇದ್ದರೂ ಸಹ ಬೋಗಸ್ ಸಾಗುವಳಿ ಚೀಟಿ ಆಧಾರದ ಮೇಲೆ ಸೃಷ್ಟಿಸಲಾದ ಬೋಗಸ್ ಮಂಜೂರು ದಾಖಲೆಗಳ ಆಧಾರದ ಮೇಲೆ ಭೂಮಾಪನ ಕಾರ್ಯ ನಿರ್ವಹಿಸುವ ಮೂಲಕ ಹೊಸ ಸರ್ವೆ ನಂಬರುಗಳನ್ನು ನೀಡುವಲ್ಲಿ ಕರ್ತವ್ಯ ಲೋಪ ಎಸಗಿರುವ ಆರೋಪವು ಸಾಬೀತಾಗಿರುತ್ತದೆ. (6) ಶ್ರೀ ಆಂಜನಪ್ಪ, ದ್ವಿತೀಯ ದರ್ಜೆ ಭೂಮಾಪಕರು ಇವರು ADLR ರವರಿಂದ ಕ್ರಮ ಸಂಖ್ಯೆ: 1 ರಿಂದ 27 ರವರೆಗಿನ ಕಡತಗಳನ್ನು ಇವರು ಸ್ವೀಕರಿಸಿದ್ದು. ಇದರಲ್ಲಿನ ಕ್ರಮ ಸಂಖ್ಯೆ: 3ರ ಕಡತವು ಪ್ರಶ್ನಿತ ಸರ್ಕಾರಿ ಜಮೀನಿಗೆ ಸಂಬಂಧಿಸಿದ ಕಡತವಾಗಿದ್ದು, ಇದನ್ನು ಇವರು ಕಛೇರಿಗೆ ಹಿಂದಿರುಗಿಸಿರುವುದಿಲ್ಲ. ಕಡತವನ್ನು ಕಛೇರಿಗೆ ಹಿಂದಿರುಗಿಸಿರುವ ಬಗ್ಗೆ ಯಾವುದೇ ಸಾಕ್ಷ್ಯವನ್ನು ಹಾಜರುಪಡಿಸಿರುವುದಿಲ್ಲ. ಆರೋಪಿತರು ಕಡತವನ್ನು ಸ್ವೀಕರಿಸಿದ್ದರೂ ಸಹ, ಅಕ್ರಮ/ಅವ್ಯವಹಾರ ಬೆಳಕಿಗೆ ಬರುತ್ತದೆ ಎಂಬ ಪ್ರಜ್ಞೆಯಿಂದ ಕಡತವನ್ನು ಹಿಂತಿರುಗಿಸದೇ ಮ್ಯುಟೇಷನ್ ಪೋಡಿ ಚೆಕ್ ವಹಿಯಲ್ಲಿ ದಾಖಲಿಸಿರುವ ನಮೂದನೆಗಳು ತನ್ನ ಕರ್ತವ್ಯದ ಅವಧಿಯಲ್ಲಿ ನಡೆದಿರುವುದಿಲ್ಲವೆಂದು ಮತ್ತು ಬರವಣಿಗೆಯು ತನ್ನದಲ್ಲವೆಂದು ಪರಿಸ್ಥಿತಿ ಲಾಭವನ್ನು ಪಡೆಯಲು ಪ್ರಜ್ಞಾಪೂರ್ವಕವಾಗಿ ವ್ಯವಹರಿಸಿರುವುದು ಕಂಡುಬಂದಿರುವುದರಿಂದ ಇವರ ವಿರುದ್ಧದ ಆರೋಪವು ಸಹ ಸಾಬೀತಾಗಿರುತ್ತದೆ.

ಸರ್ಕಾರವು ವಿಚಾರಣಾ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಅಂಗೀಕರಿಸುತ್ತಾ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ವಿಚಾರಣಾ ವರದಿಯ ನಿರಾಕರಣೆ ಬಗ್ಗೆ ಶ್ರೀ ಜೋಗಯ್ಯ ಶ್ರೀ ಇನಾಂದಾರ್, ಶ್ರೀ ತಟಗಾರ್, ಶ್ರೀಮತಿ ಲೀಲಾವತಿ, ಶ್ರೀ ಸುನೀಲ್ ಕುಮಾರ್ ಮತ್ತು ಶ್ರೀ ಆಂಜಿನಪ್ಪರವರುಗಳು ಸಲ್ಲಿಸಿದ ಲಿಖಿತ ಅಹವಾಲುಗಳು ಯಾವುದೇ ಸಮರ್ಥನೆಯಿಂದ ಕೂಡಿರುವುದಿಲ್ಲವೆಂದು ಪರಿಗಣಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 260 ಕೆಇವಿ 2007, ಬೆಂಗಳೂರು ದಿನಾಂಕ: 11ನೇ ಆಗಸ್ಟ್ 2010.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, (1) ಶ್ರೀ ವಿ.ಸಿ. ಇನಾಂದಾರ್, ಅಂದಿನ ಹಕ್ಕು ದಾಖಲೆ ಶಿರಸ್ತೇದಾರ್ (2) ಶ್ರೀಮತಿ ಎಂ. ಲೀಲಾವತಿ ಅಂದಿನ ದ್ವಿತೀಯ ದರ್ಜೆ ಸಹಾಯಕರು (3) ಶ್ರೀ ಸುನೀಲ್ ಕುಮಾರ್, ಅಂದಿನ ದ್ವಿತೀಯ ದರ್ಜೆ ಭೂಮಾಪಕರು ಮತ್ತು (4) ಶ್ರೀ ಡಿ.ಎಂ. ಆಂಜಿನಪ್ಪ, ಅಂದಿನ ದ್ವಿತೀಯ ದರ್ಜೆ ಭೂಮಾಪಕರು, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರುಗಳಿಗೆ ಇವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ (with cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ.

ಶ್ರೀ ಜೋಗಯ್ಯ ಮತ್ತು ಶ್ರೀ ತಟಗಾರ್ ಇವರುಗಳಿಗೆ ಸಂಬಂಧಿಸಿದಂತೆ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 2193

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ನೂತನ ಜಿಲ್ಲೆಯಾಗಿ ರಚನೆಗೊಂಡಿರುವ ಯಾದಗಿರಿಯ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ ಕಛೇರಿಗೆ ಹುದ್ದೆಗಳ ಸೃಜನೆ ಮರುವಿನ್ಯಾಸಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಆರ್‌ಡಿ 59 ಭೂದಾಪು 2008 ದಿನಾಂಕ: 26-12-2009.
2. ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1029 ವೆಚ್ಚ-7/2009 ದಿನಾಂಕ: 29-12-2009.
3. ಸರ್ಕಾರಿ ಆದೇಶ ಸಂಖ್ಯೆ: ಆಇ 295 ರಾಲೆಪ 2009 ದಿನಾಂಕ: 06-01-2010.
4. ಪತ್ರ ಸಂಖ್ಯೆ: ಸಕನಿ/ಸಿಬ್ಬಂದಿ-1/ಸಿಆರ್-045/2009-10, ದಿನಾಂಕ: 17-07-2010.

**ಪ್ರಸ್ತಾವನೆ :**

ನೂತನವಾಗಿ ರಚನೆಯಾದ ಯಾದಗಿರಿ ಜಿಲ್ಲೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ ಕಛೇರಿಗೆ ಹುದ್ದೆಗಳನ್ನು ಸೃಜಿಸುವುದರ ಜೊತೆಗೆ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ, ಗುಲ್ಬರ್ಗಾ ಇವರ ಕಛೇರಿಯಿಂದ ಕೆಲವು ಹುದ್ದೆಗಳನ್ನು ಸ್ಥಳಾಂತರಿಸಿ ಹುದ್ದೆಗಳನ್ನು ಮರುವಿನ್ಯಾಸಗೊಳಿಸಲು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಇಲಾಖಾ ಸಿಬ್ಬಂದಿ ಮಾದರಿ ಪ್ರಕಾರ ವಿವಿಧ ವೃಂದದಲ್ಲಿ ಒಟ್ಟು 08 ಹುದ್ದೆಗಳು ಬೇಕಾಗುತ್ತವೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 337 ಬಿಇಟಿ 2009, ಬೆಂಗಳೂರು ದಿನಾಂಕ: 30-07-2010.**

ನೂತನವಾಗಿ ರಚನೆಯಾದ ಯಾದಗಿರಿ ಜಿಲ್ಲೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ ಕಛೇರಿಗೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಪದನಾಮ | ವೇತನ ಶ್ರೇಣಿ (ರೂ.) | ಹುದ್ದೆಗಳ ಸಂಖ್ಯೆ |
|---|---|---|---|
| 1. | ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲಾಣ ಅಧಿಕಾರಿ | 14050-25050 | 01 |
| 2. | ಕಛೇರಿ ಅಧೀಕ್ಷಕರು | 10000-18150 | 01 |

| | | | |
|---|---|---|---|
| 3. | ಪ್ರಥಮ ದರ್ಜೆ ಸಹಾಯಕರು | 7275–13350 | 01 |
| 4. | ಬೆರಳಚ್ಚುಗಾರರು | 5800–10550 | 01 |
| 5. | ದ್ವಿತೀಯ ದರ್ಜೆ ಸಹಾಯಕರು | 5800–10550 | 01 |
| 6. | ವಾಹನ ಚಾಲಕರು | 5800–10550 | 01 |
| 7. | ಡಿ–ದರ್ಜೆ ನೌಕರರು | 4800–7275 | 01 |
| | ಒಟ್ಟು | | 07 |

ಅದಲ್ಲದೆ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲಾಣ ಅಧಿಕಾರಿ, ಗುಲ್ಬರ್ಗಾ ಈ ಕಛೇರಿಯಿಂದ ಒಂದು ದ್ವಿತೀಯ ದರ್ಜೆ ಸಹಾಯಕರ (ರೂ. 5800–10550) ಹುದ್ದೆ ಇವುಗಳನ್ನು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ, ಯಾದಗಿರಿ ಇವರ ಕಛೇರಿಗೆ ಸ್ಥಳಾಂತರಿಸಿ ಸಂಬಂಧಪಟ್ಟ ನೌಕರರ ಸಹಿತ ಮರುವಿನ್ಯಾಸಗೊಳಿಸಲು ಆದೇಶಿಸಿದೆ.

**ಷರತ್ತುಗಳು:**

(1) ನೂತನ ಯಾದಗಿರಿ ಜಿಲ್ಲೆಯ ವ್ಯಾಪ್ತಿಗೆ ತಾಲ್ಲೂಕು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ ಕಛೇರಿಗಳ ಉಸ್ತುವಾರಿಯನ್ನು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ, ಯಾದಗಿರಿ ಇವರಿಗೆ ವಹಿಸತಕ್ಕದ್ದು.

(2) ಗುಲ್ಬರ್ಗಾ–ಜಿಲ್ಲೆಯಿಂದ ಯಾದಗಿರಿ ಜಿಲ್ಲೆಗೆ ವರ್ಗಾವಣೆಗೊಂಡ ತಾಲ್ಲೂಕುಗಳಲ್ಲಿರುವ ವಿದ್ಯಾರ್ಥಿನಿಲಯಗಳು/ವಸತಿ ಶಾಲೆಗಳ ನಿರ್ವಹಣೆಯನ್ನು ಯಾದಗಿರಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳಿಗೆ ವಹಿಸಿಕೊಡುವುದು.

(3) ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ, ಗುಲ್ಬರ್ಗಾ ಇವರು ಹೊಸ ಜಿಲ್ಲೆಗೆ ಸಂಬಂಧಪಟ್ಟ ಕಡತಗಳನ್ನು ವಿಂಗಡಿಸಿ ಹೊಸ ಜಿಲ್ಲೆಯ ಕೇಂದ್ರ ಸ್ಥಾನಕ್ಕೆ ವರ್ಗಾಯಿಸಲು ಕ್ರಮ ಕೈಗೊಳ್ಳತಕ್ಕದ್ದು.

(4) 2010–11ನೇ ಸಾಲಿನಲ್ಲಿ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಭೌತಿಕ ಹಾಗೂ ಆರ್ಥಿಕವಾಗಿ ವಿಂಗಡಣೆ ಮಾಡಿ ಹೊಸ ಜಿಲ್ಲೆಗೆ ಗುರಿ ನಿಗಧಿಪಡಿಸತಕ್ಕದ್ದು.

(5) 2010–11ನೇ ಸಾಲಿನಲ್ಲಿ ರಾಜ್ಯ ಮತ್ತು ಜಿಲ್ಲಾ ಆಯವ್ಯಯದಲ್ಲಿ ಯಾದಗಿರಿ ಜಿಲ್ಲೆಗೆ ನಿಗಧಿಪಡಿಸಲಾಗಿರುವ ಅನುದಾನದಲ್ಲಿ ಮೇಲ್ಕಂಡ ಹುದ್ದೆಗಳಿಗೆ ಸಂಬಂಧಿಸಿದಂತೆ ವೇತನ, ಕಛೇರಿಯ ಇತರೆ ವೆಚ್ಚ ಹಾಗೂ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಅಗತ್ಯವಿರುವ ಅನುದಾನವನ್ನು ಸಂಬಂಧಪಟ್ಟ ಲೆಕ್ಕ ಶೀರ್ಷಿಕೆಗಳ ಅಡಿ ಭರಿಸತಕ್ಕದ್ದು.

(6) 2010–11ನೇ ಸಾಲಿಗೆ ಆಯವ್ಯಯದಲ್ಲಿ ಯಾದಗಿರಿ ಜಿಲ್ಲೆಗೆ ನಿಗಧಿಪಡಿಸಿರುವ ಅನುದಾನವನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಯೋಜನೆ/ಯೋಜನೇತರ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಕ್ರಮವಹಿಸುವುದು.

(7) ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ, ಯಾದಗಿರಿ ಇವರನ್ನು ಜಿಲ್ಲಾ ಕಛೇರಿಯ ಮುಖ್ಯಸ್ಥರನ್ನಾಗಿ ಘೋಷಿಸಿರುವುದರಿಂದ ಡಿ.ಡಿ.ಒ ಕೋಡ್ (ಡ್ರಾಯಿಂಗ್ ಅಂಡ್ ಡಿಸ್ಬರ್ಸಿಂಗ್ ಆಫೀಸರ್)ನ್ನು ಪಡೆಯಲು ಕ್ರಮವಹಿಸುವುದು.

(8) ನೂತನ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ ಕಛೇರಿಯನ್ನು ಸ್ಥಾಪಿಸಿ ಸಂಬಂಧಪಟ್ಟ ಸಿಬ್ಬಂದಿಗಳನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ನೇಮಕಾತಿ ಮಾಡಿಕೊಳ್ಳುವುದು/ಹುದ್ದೆಗಳನ್ನು ಮರುವಿನ್ಯಾಸಗೊಳಿಸತಕ್ಕದ್ದು.

(9) ಹೊಸ ಜಿಲ್ಲೆಯ ಜಿಲ್ಲಾ ಮಟ್ಟದ ಅಧಿಕಾರಿಗಳು ಕೆಲಸ ನಿರ್ವಹಿಸಲು ಅನುಕೂಲವಾಗುವಂತೆ ಅಧಿನಿಯಮ ಮತ್ತು ನಿಯಮಗಳಿಗೆ ತಿದ್ದುಪಡಿ ತರುವ ಅವಶ್ಯಕತೆ ಇದ್ದಲ್ಲಿ ಅಂತಹ ತಿದ್ದುಪಡಿಯನ್ನು ತರಲು ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು.

(10) 2011–12ನೇ ಸಾಲಿಗೆ ವರ್ಗಾವಣೆಗೊಂಡ ಹುದ್ದೆಗಳಿಗೆ ಸಂಬಂಧಿಸಿದಂತೆ ರಾಜ್ಯ ಆಯವ್ಯಯದ ಅಪೆಂಡಿಕ್ಸ್–ಬಿ ನಲ್ಲಿ ಹುದ್ದೆಗಳನ್ನು ಸೇರಿಸಲು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ, ಯಾದಗಿರಿ ಇವರು ಕ್ರಮವಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ: ಆ.ಇ 536 ವೆಚ್ಚ–7/2010 ದಿನಾಂಕ: 22–07–2010 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಬಾಟಿ**

ಸರ್ಕಾರದ ಅಧೀನ ಕಾರ್ಯದರ್ಶಿ–3

ಸಮಾಜ ಕಲ್ಯಾಣ ಇಲಾಖೆ

ಪಿ.ಆರ್. 2194

## ಕಂದಾಯ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಕಂಇ 57 ಎಡಿಇ 2005, ಬೆಂಗಳೂರು, ದಿನಾಂಕ : 16–8–2010**

ಸರ್ಕಾರದ ಆದೇಶ ಸಂ : ಆರ್‌ಡಿ 57 ಎಡಿಇ 2005, ದಿನಾಂಕ : 27–1–2010 ರಲ್ಲಿ ಶ್ರೀ ಆರ್.ಎಂ. ನಾಟೀಕರ್, ಹಿಂದಿನ ತಹಶೀಲ್ದಾರ್, ಚಿತ್ತಾಪುರ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು, ಅಡಿಷನಲ್ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ಎಂಬುದರ ಬದಲು ಅಡಿಷನಲ್ ಪ್ರಾದೇಶಿಕ ಆಯುಕ್ತರು (ಅಭಿವೃದ್ಧಿ ಮತ್ತು ಆಡಳಿತ), ಗುಲ್ಬರ್ಗಾ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಸ್.ಬಿ. ಸಸಾಲಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

ಪಿ. ಆರ್. 2282

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಶ್ರೀ ಶಶೀಲ್ ಜಿ. ನಮೋಶಿ, ಅಧ್ಯಕ್ಷರು, ಡಾ|| ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನದ ಉನ್ನತಾಧಿಕಾರ ಸಮಿತಿ ಇವರ ರಾಜೀನಾಮೆ ಅಂಗೀಕರಿಸುವ ಬಗ್ಗೆ

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಯೋಇ 77 ಯೋವಿವಿ 2008, ದಿನಾಂಕ : 30–9–2008.

2. ಮಾನ್ಯ ಮುಖ್ಯಮಂತ್ರಿಗಳ ಆಪ್ತ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ : ಮುಮ/ಆಕಾ/2933/2010, ದಿನಾಂಕ : 24–8–2010.

**ಪ್ರಸ್ತಾವನೆ :**

ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 30–9–2008ರ ಆದೇಶದಲ್ಲಿ ಶ್ರೀ ಶಶೀಲ್ ಜಿ. ನಮೋಶಿ, ಇವರನ್ನು ಡಾ|| ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನದ ಉನ್ನತಾಧಿಕಾರ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಲಾಗಿರುತ್ತದೆ. ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಸದರಿಯವರು ಉನ್ನತಾಧಿಕಾರ ಸಮಿತಿಯ ಅಧ್ಯಕ್ಷರ ಸ್ಥಾನಕ್ಕೆ ನೀಡಿರುವ ರಾಜೀನಾಮೆಯನ್ನು ಅಂಗೀಕರಿಸಿರುತ್ತಾರೆಂದು ತಿಳಿಸಿರುತ್ತಾರೆ.

ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಯೋಇ 77 ಯೋವಿವಿ 2008, ಬೆಂಗಳೂರು, ದಿನಾಂಕ : 25–8–2010.**

ಡಾ|| ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನದ ಉನ್ನತಾಧಿಕಾರ ಸಮಿತಿಯ ಅಧ್ಯಕ್ಷರಾದ ಶ್ರೀ ಶಶೀಲ್ ಜಿ. ನಮೋಶಿರವರು ತಮ್ಮ ಸ್ಥಾನಕ್ಕೆ ರಾಜೀನಾಮೆಯನ್ನು ನೀಡಿರುವುದನ್ನು ದಿನಾಂಕ : 24–8–2010 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಪಿ. ರಾಧಾಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ–3 (ಪರವಾಗಿ)

ಪಿ. ಆರ್. 2285 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿನ ವಿವಿಧ ವೃಂದಗಳನ್ನು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ :** 1. ಆಯುಕ್ತರು, ಕಕೊನಿಮ, ಇವರ ದಿನಾಂಕ : 4–5–2009 ರ ಪತ್ರ ಸಂಖ್ಯೆ : ಕಕೊನಿಮ/ಆಯುಕ್ತರು/2009–10/62.

2. ಆಯುಕ್ತರು, ಕಕೊನಿಮ ಇವರ ದಿನಾಂಕ : 22–5–2009ರ ಪತ್ರ ಸಂಖ್ಯೆ : ಕಕೊನಿಮ/ಆಡಳಿತ/ಹುದ್ದೆಗಳ ಮಂಜೂರಾತಿ/2009–10/109.

3. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ದಿನಾಂಕ : 18–5–2010ರ ಪತ್ರ ಸಂಖ್ಯೆ : ಕಕೊನಿಮ : ಆಡಳಿತ : ಹುದ್ದೆಗಳ ಮಂಜೂರಾತಿ : 2009–10/130.

4. ಸರ್ಕಾರದ ಆದೇಶ ಸಂಖ್ಯೆ : ವಇ 12 ಕೊಮಂಸೇ 2002, ದಿನಾಂಕ : 3–8–2004.

5. ಕಾರ್ಯದರ್ಶಿಗಳು ವಸತಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ : 2–5–09 ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ವಿವಿಧ ವೃಂದಗಳಲ್ಲಿನ ಒಟ್ಟು ಹುದ್ದೆಗಳ ಸಂಖ್ಯೆ ಪ್ರಸ್ತುತ 324 ಆಗಿರುತ್ತದೆ. ವೈಜ್ಞಾನಿಕ ಮತ್ತು ತಾಂತ್ರಿಕವಾಗಿ ಮಂಡಳಿಯ ಆಡಳಿತ ನಿರ್ವಹಣೆಯಲ್ಲಿ ಆಗಿರುವ ಬದಲಾವಣೆ/ಸುಧಾರಣೆ ಮತ್ತು ಬೆಳವಣಿಗೆಯ ಹಿನ್ನೆಲೆಯಲ್ಲಿ ಮಂಡಳಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರ ಕಾರ್ಯ ಸ್ವರೂಪದಲ್ಲಿಯೂ ಸಹಜವಾಗಿ ವ್ಯಾಪಕ ಹಾಗೂ ಗಮನಾರ್ಹ ಬದಲಾವಣೆ ಆಗಿರುತ್ತದೆ. ಈ ಹಿನ್ನೆಲೆಯಲ್ಲಿ ಹಾಗೂ ಸುಗಮ ಆಡಳಿತ ದೃಷ್ಟಿಯಿಂದ ಮಂಡಳಿಯಲ್ಲಿನ ಕೆಲವು ವೃಂದಗಳ ಮರು ಪದನಾಮೀಕರಿಸುವುದು ಅಗತ್ಯವಾಗಿದೆಯೆಂದು ಹಾಗೂ ಈ ಮರು ಪದನಾಮೀಕರಣದಿಂದ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಮಂಡಳಿಯ/ಸರ್ಕಾರದ ಮೇಲೆ ಬೀಳುವುದಿಲ್ಲವೆಂದು, ಅದರಂತೆ, ವೃಂದಗಳನ್ನು ಮರು ಪದನಾಮೀಕರಿಸುವಂತೆ ಆಯುಕ್ತರು ಕಕೊನಿಮ ರವರು, ಮೇಲೆ ಓದಲಾದ ಪತ್ರಗಳಲ್ಲಿ ಸರ್ಕಾರವನ್ನು ಕೋರಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿದೆ ಅದರಂತೆ ಮುಂದಿನ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : 10 ಕೊಮಂಸೇ 2009, ಬೆಂಗಳೂರು, ದಿನಾಂಕ : 22–7–2010.**

ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿನ ಈ ಕೆಳಕಂಡ ವೃಂದಗಳಲ್ಲಿನ ಹುದ್ದೆಗಳನ್ನು ಅವುಗಳ ಎದುರು ತೋರಿಸಿರುವಂತೆ ಮರು ಪದನಾಮೀಕರಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ವಿವಿಧ ವೃಂದಗಳ ಮರು ಪದನಾಮೀಕರಿಸಲಾದ ವೃಂದಗಳ ವಿವರಗಳು ಕೆಳಕಂಡಂತಿದೆ.

| ಕ್ರ.ಸಂ. | ವೃಂದದ ಪದನಾಮ | ಹುದ್ದೆ ಸಂಖ್ಯೆ | ವೇತನ ಶ್ರೇಣಿ | ವೃಂದದ ಮರು ಪದನಾಮ | ಹುದ್ದೆ ಸಂಖ್ಯೆ | ವೇತನ ಶ್ರೇಣಿ |
|---|---|---|---|---|---|---|
| 1 | ಸಹಾಯಕ ಆಯುಕ್ತರು | 1 | 15200–25650 | ಕಾರ್ಯದರ್ಶಿ | 1 | 15200–25650 |
| 2 | ಕಿರಿಯ ನಗರ ಯೋಜಕರು | 2 | 11400–21600 | ಸಹಾಯಕ ಕಂದಾಯ ಅಧಿಕಾರಿ | 1 | 11400–21600 |
| | | | | ಕಾನೂನು ಅಧಿಕಾರಿ(ಗ್ರೇಡ್–2) | 1 | 11400–21600 |
| 3 | ಹಿರಿಯ ವ್ಯವಸ್ಥಾಪಕರು | 1 | 11400–21600 | ಸಹಾಯಕ ಕಂದಾಯ ಅಧಿಕಾರಿ | 1 | 11400–21600 |
| 4 | ವ್ಯವಸ್ಥಾಪಕರು | 1 | 10000–18150 | ಅಧೀಕ್ಷಕ | 1 | 10000–18150 |
| 5 | ಹಿರಿಯ ಸಾಂಖ್ಯಿಕ ಸಹಾಯಕ | 4 | 10000–18150 | ಅಧೀಕ್ಷಕ | 4 | 10000–18150 |
| 6 | ಕಂದಾಯ ನಿರೀಕ್ಷಕರು | 5 | 7275–13350 | ಪ್ರ.ದ. ಸಹಾಯಕ | 5 | 7275–13350 |
| 7 | ನಗರ ಯೋಜನೆ ಪರಿವೀಕ್ಷಕ | 3 | 8825–16000 | ಹಿರಿಯ ವಾಹನ ಚಾಲಕ | 3 | 7275–13350 |

| | | | | | | |
|---|---|---|---|---|---|---|
| 8 | ಪ್ರ.ದ. ಉಗ್ರಾಣ ಸಹಾಯಕ | 1 | 7275–13350 | ಪ್ರ.ದ. ಸಹಾಯಕ | 1 | 7275–13350 |
| 9 | ಕಿ. ಸಾಂಖ್ಯಿಕ ಸಹಾಯಕ | 5 | 7275–13350 | ಪ್ರ.ದ. ಸಹಾಯಕ | 5 | 7275–13350 |
| 10 | ಶೀಘ್ರಲಿಪಿಗಾರರು | 5 | 7275–13350 | ಆಪ್ತ ಸಹಾಯಕ | 5 | 7275–13350 |
| 11 | ಇನ್‌ಪುಟ್ ಅಸಿಸ್ಟೆಂಟ್ ಗ್ರೇಡ್–1 | 1 | 7275–13350 | ಕಂಪ್ಯೂಟರ್ ಆಪರೇಟರ್ | 1 | 7275–13350 |
| 12 | ದ್ವಿ. ದರ್ಜೆ ಉಗ್ರಾಣ ಸಹಾಯಕರು | 1 | 5800–10500 | ದ್ವಿ.ದ. ಸಹಾಯಕ | 1 | 5800–10500 |
| 13 | ಗುಮಾಸ್ತ–ಯ ಬೆರಳಚ್ಚುಗಾರ | 8 | 5800–10500 | ದ್ವಿ.ದ. ಸಹಾಯಕ | 8 | 5800–10500 |
| 14 | ಬೆರಳಚ್ಚುಗಾರ | 7 | 5800–10500 | ಡಾಟಾ ಎಂಟ್ರಿ ಆಪರೇಟರ್ | 7 | 5800–10500 |
| 15 | ನೀಲಿ ನಕ್ಷೆಗಾರ | 1 | 5800–10500 | ಡಾಟಾ ಎಂಟ್ರಿ ಆಪರೇಟರ್ | 1 | 5800–10500 |

ಮುಂದುವರೆದು ಮಂಡಳಿಯಲ್ಲಿನ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸೂಕ್ತ ತಿದ್ದುಪಡಿಗಳನ್ನು ಪ್ರತ್ಯೇಕವಾಗಿ ಪರಿಶೀಲಿಸಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಆರ್. ನಾಗರಾಜ**

ಪಿ. ಆರ್. 2286 ಪೀಠಾಧಿಕಾರಿ–4, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ಹೆಚ್ಚುವರಿಯಾಗಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಕಕೊನಿಮ, ಇವರ ದಿನಾಂಕ : 4–5–2009 ರ ಪತ್ರ ಸಂಖ್ಯೆ : ಕಕೊನಿಮ/ಆಯುಕ್ತರು/2009–10/62.
2. ಆಯುಕ್ತರು, ಕಕೊನಿಮ ಇವರ ದಿನಾಂಕ : 22–5–2009ರ ಪತ್ರ ಸಂಖ್ಯೆ : ಕಕೊನಿಮ/ಆಡಳಿತ/ಹುದ್ದೆಗಳ ಮಂಜೂರಾತಿ/2009–10/109.
3. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ದಿನಾಂಕ : 18–5–2010ರ ಪತ್ರ ಸಂಖ್ಯೆ : ಕಕೊನಿಮ : ಆಡಳಿತ : ಹುದ್ದೆಗಳ ಮಂಜೂರಾತಿ : 2009–10/130.
4. ಸರ್ಕಾರದ ಆದೇಶ ಸಂಖ್ಯೆ : ವಇ 12 ಕೊಮಂಸೇ 2002, ದಿನಾಂಕ : 3–8–2004.
5. ಕಾರ್ಯದರ್ಶಿಗಳು ವಸತಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ : 2–5–09 ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು, ಕೊಳಚೆ ಪ್ರದೇಶಗಳಲ್ಲಿ ವಾಸಿಸುವ ನಿವಾಸಿಗಳಿಗೆ ವಸತಿ ಸೌಲಭ್ಯವನ್ನು ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸುತ್ತಾ ಬಂದಿರುತ್ತದೆ. ಕೇಂದ್ರ ಪುರಸ್ಕೃತ "ವಾಲ್ಮೀಕಿ ಅಂಬೇಡ್ಕರ್ ಆವಾಸ್ ಯೋಜನೆ" ಯಡಿಯಲ್ಲಿ 2002–03 ರಿಂದ ಈವರೆವಿಗೆ, ರಾಜ್ಯದ ವಿವಿಧ ಕೊಳಚೆ ಪ್ರದೇಶಗಳಲ್ಲಿ 34,538 ಮನೆಗಳನ್ನು ನಿರ್ಮಿಸಿ ಅರ್ಹ ಫಲಾನುಭವಿಗಳಿಗೆ ಹಂಚಿಕೆ ಮಾಡಲಾಗಿದೆ. ಪ್ರಸ್ತುತ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರದ ಸಹಭಾಗಿತ್ವದ JNNURM ಯೋಜನೆಯ ಬಿಎಸ್‌ಯುಪಿ ಯಡಿಯಲ್ಲಿ ಬೆಂಗಳೂರು ನಗರ ಮತ್ತು ಮೈಸೂರು ನಗರದ ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಿರುವವರಿಗೆ ಮೂಲಭೂತ ಸೌಕರ್ಯಗಳನ್ನೊಳಗೊಂಡಂತೆ, ಕ್ರಮವಾಗಿ 18,180 ಮತ್ತು 6328 ಮನೆಗಳನ್ನು ನಿರ್ಮಿಸಬೇಕಾಗಿರುತ್ತದೆ. ಹಾಗೂ ರಾಜ್ಯದ ಇತರ ನಗರಗಳಲ್ಲಿನ ಕೊಳಚೆ ಪ್ರದೇಶದಲ್ಲಿ ವಾಸಿಸುವ ನಿವಾಸಿಗಳಿಗೆ ಐಹೆಚ್‌ಎಸ್‌ಡಿ ಯಡಿಯಲ್ಲಿ ಮೂಲಭೂತ ಸೌಕರ್ಯಗಳನ್ನೊಳಗೊಂಡಂತೆ 17,237 ಮನೆಗಳನ್ನು ನಿರ್ಮಿಸಬೇಕಾಗಿರುತ್ತದೆ. ಬಿಎಸ್‌ಯುಪಿ ಯೋಜನೆಗಳಿಗೆ 634 ಕೋಟಿ ಮತ್ತು ಐಹೆಚ್‌ಎಸ್‌ಡಿಪಿ ಯೋಜನೆಗಳಿಗೆ 410 ಕೋಟಿ ರೂಪಾಯಿಗಳನ್ನು ಕೇಂದ್ರ ಸರ್ಕಾರ ಮಂಜೂರಾತಿ ನೀಡಿರುತ್ತದೆ. ಪ್ರಸ್ತಾಪಿತ ಯೋಜನೆಗಳ ಫಲಾನುಭವಿಗಳ ವಂತಿಕೆಯನ್ನು ಮಾಸಿಕ ಕಂತುಗಳ ರೂಪದಲ್ಲಿ ವಸೂಲಿ ಮಾಡಿ ಹುಡ್ಕೋ ಸಂಸ್ಥೆಗೆ ಪಾವತಿಸಿ ಸಾಲವನ್ನು ತೀರಿಸಬೇಕಾದ ಮಹತ್ತರ ಕಾರ್ಯವು ಮಂಡಳಿಯ ಜವಾಬ್ದಾರಿಯಾಗಿರುತ್ತದೆ. ಅದರಂತೆ ಈ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಮಂಡಳಿಯು ಪೂರಕ ಅಧಿಕಾರಿ/ಸಿಬ್ಬಂದಿಯ ಕೊರತೆಯನ್ನು ಎದುರಿಸುತ್ತಿರುವುದರಿಂದ, ಈ ಕೊರತೆಯನ್ನು ನಿವಾರಿಸಲು ಮಂಡಳಿಗೆ ಅದಕ್ಕೆ ತಕ್ಕಂತೆ ತಾಂತ್ರಿಕ/ತಾಂತ್ರಿಕೇತರ ಹುದ್ದೆಗಳ ಅವಶ್ಯಕತೆ ಇರುತ್ತದೆ.

ಮಂಡಳಿಗೆ ಸರ್ಕಾರದ ಆಯವ್ಯಯ–1979ರಲ್ಲಿ, 74.65 ಲಕ್ಷ ರೂಪಾಯಿಗಳಿದ್ದು, ಸರ್ಕಾರವು ಅಂದಿನ ಕಾರ್ಯ ಒತ್ತಡಕ್ಕೆ ಹಾಗೂ ಆಯವ್ಯಯಕ್ಕೆ ಅನುಗುಣವಾಗಿ ವಿವಿಧ ವರ್ಗಗಳ 219 ಹುದ್ದೆಗಳನ್ನು ಮಂಜೂರು ಮಾಡಲಾಗಿದ್ದು, ಪ್ರಸಕ್ತ ಸಾಲಿನ ಆಯವ್ಯಯ ರೂ. 750.00 ಲಕ್ಷ ರೂಪಾಯಿಗಳಾಗಿದ್ದು, ಅದರಂತೆ ಮಂಡಳಿಯ ಕಾರ್ಯಬಾಹುಳ್ಯ ವಿಸ್ತಾರವಾಗಿರುತ್ತದೆ. ಮಂಡಳಿಯ ವ್ಯಾಪ್ತಿಯಲ್ಲಿನ 5 ವಿಭಾಗಗಳಲ್ಲಿ 15 ಉಪ ವಿಭಾಗಗಳನ್ನು ಹೊಂದಿರುತ್ತದೆ. ಮಂಡಳಿಯ ಕಾರ್ಯದ ಒತ್ತಡ ಅಧಿಕವಾಗಿರುವುದರಿಂದ ಹಾಗೂ ಕಾರ್ಯಬಾಹುಳ್ಯ ವಿಸ್ತಾರವಾಗಿರುವುದರಿಂದ ಹೊಸದಾಗಿ 6 ವಿಭಾಗ ಹಾಗೂ 5 ಉಪವಿಭಾಗಗಳನ್ನು ತೆರೆಯುವುದು ಅವಶ್ಯಕವಾಗಿರುತ್ತದೆ. ಮಂಡಳಿಯಲ್ಲಿ ವಿವಿಧ ಹುದ್ದೆಗಳಲ್ಲಿನ ಸಂಖ್ಯಾತಿರಿಕ್ತ ಹುದ್ದೆಗಳಲ್ಲಿ ಖಾಯಂಗೊಂಡಿರುವ ನೌಕರರಿದ್ದು, ಅವರುಗಳನ್ನು ಖಾಯಂ ಹುದ್ದೆಗಳಲ್ಲಿ ವಿಲೀನಗೊಳಿಸಬೇಕಾಗಿರುತ್ತದೆ. ಅಲ್ಲದೆ ಮಂಡಳಿಯ ಈಗಿನ ಕಾರ್ಯಕ್ರಮಕ್ಕೆ ಅನುಗುಣವಾಗಿ ಕೆಲವು ಹುದ್ದೆಗಳನ್ನು ಸೃಜಿಸುವ ಅವಶ್ಯಕತೆಯಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ತಾಂತ್ರಿಕ ನಿರ್ದೇಶಕರು–2 ಹುದ್ದೆ ಸಮುದಾಯ ಅಭಿವೃದ್ಧಿ ಸಮನ್ವಯ ಅಧಿಕಾರಿ–1 ಹುದ್ದೆ ಕಾರ್ಯಪಾಲಕ ಇಂಜಿನಿಯರ್–6 ಹುದ್ದೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್–5 ಹುದ್ದೆ, ಸಹಾಯಕ ಇಂಜಿನಿಯರ್–4 ಹುದ್ದೆ, ಕಿರಿಯ ಇಂಜಿನಿಯರ್–2 ಹುದ್ದೆ, ಸಹಾಯಕ ಕಂದಾಯ ಅಧಿಕಾರಿ–6 ಹುದ್ದೆ, ಅಧೀಕ್ಷಕ–14 ಹುದ್ದೆ, ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ–1, ಕಂಪ್ಯೂಟರ್ ಪ್ರೋಗ್ರಾಮರ್–1 ಹುದ್ದೆ, ಕಂಪ್ಯೂಟರ್ ಆಪರೇಟರ್–8 ಹುದ್ದೆ, ಪ್ರಥಮ ದರ್ಜೆ ಸಹಾಯಕ–6 ಹುದ್ದೆ, ಹಿರಿಯ ಕೆಲಸ ನಿರೀಕ್ಷಕ–12, ಕಿರಿಯ ಕೆಲಸ ನಿರೀಕ್ಷಕ–15, ಬಿಲ್‌ಕಲೆಕ್ಟರ್–22 ಹುದ್ದೆಗಳನ್ನು ಸೃಜಿಸುವುದು ಅವಶ್ಯಕವಾಗಿದೆಯೆಂದು, ಮಂಡಳಿಯ ಆಯುಕ್ತರು, ಮೇಲೆ ಓದಲಾದ ಪತ್ರಗಳಲ್ಲಿ ಸದರಿ ಹುದ್ದೆಗಳನ್ನು ಸೃಜಿಸಲು

ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಮಂಡಳಿಯ ಪ್ರಸ್ತಾವನೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ, ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : 10 ಕೊಮಂಸೇ 2009, ಬೆಂಗಳೂರು, ದಿನಾಂಕ : 15–7–2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ಈ ಕೆಳಕಂಡಂತೆ 2 ತಾಂತ್ರಿಕ ನಿರ್ದೇಶಕರ ಹುದ್ದೆಗಳನ್ನು ಹಾಗೂ 1 ಸಮುದಾಯ ಅಭಿವೃದ್ಧಿ ಸಮನ್ವಯಾಧಿಕಾರಿ ಹುದ್ದೆಯನ್ನು ಹಾಗೂ ಇತರೆ 102 ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಮತ್ತು ಈ ಹುದ್ದೆಗಳನ್ನು ನೇರನೇಮಕಾತಿ ಮತ್ತು ಮುಂಬಡ್ತಿ ಮೂಲಕ ಹಾಗೂ ಸಂಖ್ಯಾತಿರಿಕ್ತ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರನ್ನು ವಿಲೀನಗೊಳಿಸಿ ಸರಿದೂಗಿಸುವ ಮುಖಾಂತರ ಭರ್ತಿ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ತಾಂತ್ರಿಕ ನಿರ್ದೇಶಕರು | 2 | 20025–28075 |
| 2 | ಸಮುದಾಯ ಅಭಿವೃದ್ಧಿ ಸಮನ್ವಯಾಧಿಕಾರಿ | 1 | 18150–26925 |
| 3 | ಕಾರ್ಯಪಾಲಕ ಇಂಜಿನಿಯರ್ | 6 | 18150–26925 |
| 4 | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 5 | 14050–25000 |
| 5 | ಸಹಾಯಕ ಇಂಜಿನಿಯರ್ | 4 | 11400–21600 |
| 6 | ಕಿರಿಯ ಇಂಜಿನಿಯರ್ | 2 | 8825–16000 |
| 7 | ಸಹಾಯಕ ಕಂದಾಯ ಅಧಿಕಾರಿ | 6 | 11400–21600 |
| 8 | ಅಧೀಕ್ಷಕರು | 14 | 10000–18150 |
| 9 | ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ | 1 | 10000–18150 |
| 10 | ಕಂಪ್ಯೂಟರ್ ಪ್ರೋಗ್ರಾಮರ್ | 1 | 10000–18150 |
| 11 | ಕಂಪ್ಯೂಟರ್ ಆಪರೇಟರ್ | 8 | 7275–13350 |
| 12 | ಪ್ರಥಮ ದರ್ಜೆ ಸಹಾಯಕ | 6 | 7275–13350 |
| 13 | ಹಿರಿಯ ಕೆಲಸ ನಿರೀಕ್ಷಕ | 12 | 7275–13350 |
| 14 | ಕಿರಿಯ ಕೆಲಸ ನಿರೀಕ್ಷಕ | 15 | 5800–10500 |
| 15 | ಬಿಲ್ ಕಲೆಕ್ಟರ್ | 22 | 5800–10500 |
| | ಒಟ್ಟು | 105 | |

ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸೂಕ್ತವಾದ ತಿದ್ದುಪಡಿಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಮಂಡಳಿಯ ವಿವಿಧ ವೃಂದಗಳಲ್ಲಿ ತೆರವಾಗಬಹುದಾದ 25 ರಿಕ್ತಸ್ಥಾನಗಳನ್ನು 2013ನೇ ಮಾರ್ಚ್‌ವರೆಗೆ ಭರ್ತಿ ಮಾಡತಕ್ಕದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 386 ವೆಚ್ಚ 09/2010, ದಿನಾಂಕ : 29–6–2010ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಆರ್. ನಾಗರಾಜ**

ಪಿ. ಆರ್. 2287 ಪೀಠಾಧಿಕಾರಿ–4, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ದಾಸರಹಳ್ಳಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ವಇ/42/ಹೆಚ್‌ಎಎಂ/1999, ದಿನಾಂಕ : 10–5–2000.

2. ಸರ್ಕಾರದ ಆದೇಶ ಸಂಖ್ಯೆ : ವಇ/18/ಹೆಚ್‌ಎಎಸ್/2008, ದಿನಾಂಕ : 16–9–2009.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1) ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ದಾಸರಹಳ್ಳಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 51 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ : 24ನೇ ಆಗಸ್ಟ್ 2010.**

ದಾಸರಹಳ್ಳಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಎಂ. ಮುನಿರಾಜು ಬಿನ್ ಲೇ : ಮುನಿಯಪ್ಪ, ನಂ. 138/1ಎ, ಆಫೀಸರ್ಸ್ ಮಾಡಲ್ ಕಾಲೋನಿ, ಟಿ. ದಾಸರಹಳ್ಳಿ ಅಂಚೆ, ಬೆಂಗಳೂರು–560057 | ಪರಿಶಿಷ್ಟ ಜಾತಿ |
| 2 | ಶ್ರೀ ಎನ್.ಆರ್. ರಾಜಣ್ಣ ಬಿನ್ ಲೇ : ರಾಜಣ್ಣ, ನಂ. 12, ನಾಗಸಂದ್ರ ಮುಖ್ಯ ರಸ್ತೆ, ಆಂಜನೇಯ ದೇವಸ್ಥಾನದ ಮುಂಭಾಗ, ನಾಗಸಂದ್ರ, ಬೆಂಗಳೂರು–73. | ಹಿಂದುಳಿದ ವರ್ಗ |
| 3 | ಶ್ರೀ ಎಸ್. ಪಾರ್ಥಿನಾಥನ್ ಬಿನ್ ಸ್ಟೀಫನ್, ನಂ. 13, ಸ್ಟೀಫನ್ ಸ್ಕೂಲ್ ಹಿಂಭಾಗ, ಕಮ್ಮಗೊಂಡನಹಳ್ಳಿ, ಬೆಂಗಳೂರು–560013. | ಅಲ್ಪಸಂಖ್ಯಾತರು |
| 4 | ಶ್ರೀಮತಿ ಎಸ್. ರಾಜೇಶ್ವರಿ ಕೋಂ ಮಂಜುನಾಥ್ ಡಿ.ಎ. ನಂ. 28, 3ನೇ ಅಡ್ಡ ರಸ್ತೆ, ವಿದ್ಯಾನಗರ, ವೀಡಿಯಾ ಸ್ಕೂಲ್ ಹಿಂಭಾಗ, ಮುನಿಕೊಂಡಪ್ಪ ಬಡಾವಣೆ, ಬೆಂಗಳೂರು–73. | ಸಾಮಾನ್ಯ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಆರ್. ವಲ್ಲೂರ**

ಪಿ. ಆರ್. 2288 ಪೀಠಾಧಿಕಾರಿ–2, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಹುಬ್ಬಳ್ಳಿಯ ಜೈ ಹನುಮಾನ್ ನಗರದ ಗುಡಿಸಲುವಾಸಿಗಳಿಗೆ ವಾಜಪೇಯಿ ನಗರ ವಸತಿ ಯೋಜನೆಯಡಿ ಮನೆಗಳನ್ನು ನಿರ್ಮಿಸುವ ಬಗ್ಗೆ.

**ಓದಲಾಗಿದೆ :**
1. ಧಾರವಾಡ ಜಿಲ್ಲಾಧಿಕಾರಿಯವರ ಅರೆ ಸರ್ಕಾರಿ ಪತ್ರ ಸಂಖ್ಯೆ : UD CELL/Ashraya/CR/2010-11, ದಿನಾಂಕ : 8–7–2010.
2. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ, ಇವರ ಪತ್ರ ಸಂ. ಎಂಡಿಆರ್‌ಜಿಆರ್‌ಹೆಚ್‌ಸಿಎಲ್ 01 ವಿಹೆಚ್‌ಎಸ್ 06, 2010, ದಿನಾಂಕ : 11–8–2010.
3. ಸರ್ಕಾರದ ಆದೇಶ ಸಂ. ವಇ 06 ಹೆಚ್‌ಎಹೆಚ್, ದಿನಾಂಕ : 13–4–2010.
4. ದಿನಾಂಕ : 6–7–2010 ರಂದು ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಅಧ್ಯಕ್ಷತೆಯಲ್ಲಿ ವಿವಿಧ ವಸತಿ ಯೋಜನೆಗಳ ಪ್ರಗತಿ ಪರಿಶೀಲನೆ ಕುರಿತು ನಡೆದ ವಿಡಿಯೋ ಕಾನ್ಫರೆನ್ಸ್ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಧಾರವಾಡ ಜಿಲ್ಲಾಧಿಕಾರಿಗಳು ಹುಬ್ಬಳ್ಳಿ ನಗರದಲ್ಲಿ ಜೈ ಹನುಮಾನ್ ನಗರದಲ್ಲಿನ ಸರ್ವೆ ನಂ. 3110 ರ ಒಟ್ಟು 0.34 ಎಕರೆ ಜಮೀನಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಿಂದ ಗುರುತಿಸಲ್ಪಟ್ಟ 64 ಕುಟುಂಬಗಳ ಕೊಳಗೇರಿಯಲ್ಲಿ 29.97 ಚ.ಮಿ. ವಿಸ್ತೀರ್ಣದ ಜಮೀನಿನಲ್ಲಿ ತಲಾ 2.00 ಲಕ್ಷ ರೂ.ಗಳ ಘಟಕ ವೆಚ್ಚದಲ್ಲಿ ನೆಲಮಹಡಿ + 2 ಮಹಡಿ ಮಾದರಿಯಲ್ಲಿ ಒಟ್ಟು 96 ಮನೆಗಳನ್ನು ನಿರ್ಮಿಸಲು ಪ್ರಸ್ತಾಪಿಸಿರುತ್ತಾರೆ. ಪ್ರತಿ ಮನೆಗೆ ತಗಲುವ ಘಟಕ ವೆಚ್ಚದ 2.00 ಲಕ್ಷ ರೂ.ಗಳ ಮೊತ್ತದಲ್ಲಿ ವಾಜಪೇಯಿ ನಗರ ವಸತಿ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಲಭ್ಯವಿರುವ 50,000 ರೂ.ಗಳ ಸಹಾಯಧನ ಹಾಗೂ ಫಲಾನುಭವಿಗಳ ವಂತಿಕೆ ಮತ್ತು ಬ್ಯಾಂಕ್ ಸಾಲದಿಂದ 1.50 ಲಕ್ಷ ರೂ.ಗಳ ಮೊತ್ತವನ್ನು ಸಂಗ್ರಹಿಸಲು ಪ್ರಸ್ತಾಪಿಸಲಾಗಿದೆ. ಈ ಬಡಾವಣೆಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು 69.05 ಲಕ್ಷಗಳ ಅವಶ್ಯಕತೆ ಇದ್ದು. ಸದರಿ ಮೊತ್ತವನ್ನು ಸಂಗ್ರಹಿಸುವುದಕ್ಕಾಗಿ ಜಿಲ್ಲಾಧಿಕಾರಿಗಳು, ಈ ಕುಟುಂಬಗಳಿಗಾಗಿ ನಿರ್ಮಿಸುವ 64 ಮನೆಗಳಲ್ಲದೆ ಇನ್ನು 32 ಹೆಚ್ಚು ಮನೆಗಳನ್ನು ನಿರ್ಮಿಸಿ ಆ ಮನೆಗಳನ್ನು ಸಾರ್ವಜನಿಕ ಹರಾಜಿನ ಮೂಲಕ ವಿಲೇವಾರಿ ಮಾಡಿ ಬಂದ ಮೊತ್ತದಿಂದ ಭರಿಸಲು ಪ್ರಸ್ತಾಪಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 39 ಹೆಚ್‌ಎಹೆಚ್ 2010, ಬೆಂಗಳೂರು, ದಿನಾಂಕ : 24ನೇ ಆಗಸ್ಟ್ 2010.**

ಹುಬ್ಬಳ್ಳಿಯಲ್ಲಿನ ಜೈ ಹನುಮಾನ್ ನಗರದಲ್ಲಿನ ಸರ್ವೆ ನಂ. 3110 ರ ಒಟ್ಟು 0.34 ಎಕರೆ ಜಮೀನಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಿಂದ ಗುರುತಿಸಲಾದ ಕೊಳಗೇರಿಯಲ್ಲಿ ವಾಸಿಸುತ್ತಿರುವ 64 ಕುಟುಂಬಗಳಿಗೆ ವಾಜಪೇಯಿ ನಗರ ವಸತಿ ಯೋಜನೆಯಡಿ ವಸತಿ ಕಲ್ಪಿಸುವುದಕ್ಕಾಗಿ ತಲಾ 2.00 ಲಕ್ಷ ರೂ.ಗಳ ಘಟಕ ವೆಚ್ಚದಲ್ಲಿ 29.97 ಚದರಮೀಟರ್ ವಿಸ್ತೀರ್ಣದ ಒಟ್ಟು 96 ಮನೆಗಳನ್ನು ನೆಲಮಹಡಿ + 1 ಮಹಡಿಗಳ ಸಂಕೀರ್ಣಗಳಲ್ಲಿ ಒಟ್ಟು 191.13 ಲಕ್ಷ ರೂ.ಗಳ (ಒಂದು ಕೋಟಿ ತೊಂಭತ್ತೊಂದು ಲಕ್ಷದ ಹದಿಮೂರು ಸಾವಿರ ರೂ.ಗಳು ಮಾತ್ರ) ವೆಚ್ಚದಲ್ಲಿ ನಿರ್ಮಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

2. ಬಡಾವಣೆಗೆ ಕುಡಿಯುವ ನೀರು, ವಿದ್ಯುತ್ ಸೌಕರ್ಯ, ರಸ್ತೆ, ಒಳಚರಂಡಿ ಮುಂತಾದವುಗಳಿಗಾಗಿ ಸರ್ಕಾರದ ವಿವಿಧ ಯೋಜನೆಗಳಡಿ ಲಭ್ಯವಿರುವ ಅನುದಾನವನ್ನು ಪಡೆದಿರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು. ಆದಾಗ್ಯೂ, ಹೆಚ್ಚುವರಿ ಅನುದಾನದ ಅವಶ್ಯಕತೆ ಇದ್ದಲ್ಲಿ, ಜಿಲ್ಲಾಧಿಕಾರಿಗಳು ಈ ಸಂಕೀರ್ಣಗಳಲ್ಲಿನ ನೆಲಮಹಡಿಯಲ್ಲಿನ ಒಟ್ಟು 32 ಮನೆಗಳನ್ನು ಬಹಿರಂಗವಾಗಿ ಹರಾಜು ಮಾಡಿ, ಬಂದ ಆದಾಯದಿಂದ ವೆಚ್ಚವನ್ನು ಭರಿಸತಕ್ಕದ್ದು, ಹರಾಜಿನಿಂದ ಹೆಚ್ಚುವರಿ ಮೊತ್ತ ಸಂಗ್ರಹವಾದ ಪಕ್ಷದಲ್ಲಿ ಅದನ್ನು ಜಿಲ್ಲೆಯ ಇತರ ವಾಜಪೇಯಿ ನಗರ ವಸತಿ ಯೋಜನೆಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3. ಮನೆಗಳ ನಿರ್ಮಾಣವು ಅನುಬಂಧದಲ್ಲಿನ ನಕ್ಷೆಗೆ ಅನುಗುಣವಾಗಿರತಕ್ಕದ್ದು. ಹಾಗೂ ಈ ಮನೆಗಳನ್ನು ನಿರ್ಮಿತಿ ಕೇಂದ್ರದ ಮೂಲಕ ನಿರ್ಮಿಸಲು ಆದ್ಯತೆ ನೀಡುವುದು.

4. ಪ್ರತಿ ಮನೆ ನಿರ್ಮಾಣಕ್ಕೆ ಅವಶ್ಯವಿರುವ 2.00 ಲಕ್ಷ ರೂ.ಗಳ ಘಟಕ ವೆಚ್ಚವನ್ನು, ಫಲಾನುಭವಿಯ ವಂತಿಕೆ ಮತ್ತು ಬ್ಯಾಂಕ್ ಸಾಲದಿಂದ 1.50 ಲಕ್ಷ ರೂ. ಗಳಿಂದ ಹಾಗೂ ವಾಜಪೇಯಿ ನಗರ ವಸತಿ ಯೋಜನೆಯಡಿ ಲಭ್ಯವಿರುವ 50,000 ರೂ.ಗಳ ಸಹಾಯಧನದಿಂದ ಭರಿಸತಕ್ಕದ್ದು.

5. ಸರ್ಕಾರದ 50,000 ರೂ.ಗಳ ಸಹಾಯಧನಕ್ಕಾಗಿ ರಾಜೀನ್ ಗಾಂಧಿ ಗ್ರಾಮೀಣ ವಸತಿ ನಿಗಮವು 15,000 ರೂ.ಗಳನ್ನು ಮತ್ತು ಕರ್ನಾಟಕ ಗೃಹ ಮಂಡಳಿಯಿಂದ 35,000 ರೂ.ಗಳನ್ನು ಕ್ರೋಢೀಕರಿಸಿ ಫಲಾನುಭವಿಗಳ ಮನೆ ನಿರ್ಮಾಣಕ್ಕೆ ನೀಡಲು ಕ್ರಮ ಕೈಗೊಳ್ಳುವುದು.

6. ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯ ಆಯುಕ್ತರು ಫಲಾನುಭವಿಗಳಿಂದ ವಂತಿಕೆ ಮತ್ತು ಬ್ಯಾಂಕ್ ಸಾಲದ ಮೊತ್ತ ಪಡೆಯಲು ಎಲ್ಲ ಅವಶ್ಯ ಕ್ರಮ ಕೈಗೊಳ್ಳುವರು ಹಾಗೂ ಸಂಬಂಧಪಟ್ಟ ಬ್ಯಾಂಕುಗಳು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ಮತ್ತಿತರ ಸಂಸ್ಥೆಗಳಿಗೆ ಸಮನ್ವಯಾಧಿಕಾರಿಯಾಗಿ ಕಾರ್ಯನಿರ್ವಹಿಸುವರು.

7. ಧಾರವಾಢ ಜಿಲ್ಲೆಯ ಜಿಲ್ಲಾಧಿಕಾರಿಗಳು ಈ ಕಾರ್ಯಕ್ರಮವನ್ನು ಫಲಪ್ರದವಾಗಿ ಜರುಗಿಸಲು ನಿಯತವಾಗಿ ಸಭೆಗಳನ್ನು ಜರುಗಿಸಿ, ಅವಶ್ಯವಿರುವ ಎಲ್ಲ ಕ್ರಮ ಕೈಗೊಳ್ಳುವರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

# ಅನುಬಂಧ


GENERAL NOTES
LEGEND
NO TYPE/ No's SIZE
1 D 1.10X2.13
2 D1 0.76X2.13
3 O 0.76X2.13
4 W 1.00 x 0.76
5 V 0.60X0.46
6 WR 1.50X0.35
7 OPEN TO SKY
TOTAL PLINTH AREA
Single Unit: 26.97 Sq.mt
Four Units: 107.88 Sq.mt
G+1 floor :- 8 Units
Staircase: 5.70 Sq.mt
Corridor: 8.90 Sq.mt
PROJECT: VAJAPEYI URBAN HOUSING SCHEME
Gandhiwad
Bandiwad Village, Taluka- Hubli,
Dist- Dharwad
SURVEY.NO's- 98,99,100
DRAWN:
SHRIKANT.P
SHEET
ASP -03
SCALE:
1:100
DATE:
17.12.07
N
CONSULTANT:
PREPARED BY:
S.P.CONSULTANTS
VIDYA NAGAR
HUBLI
Commissioner
Asst Eng
ASST EXEC ENG
EXEC ENG
Techanical Director
2.71
2.40
0.23
BED
2.25X2.39
KITCHEN
2.40X1.50
SHELF
HALL
2.40X3.20
BATH
1.13X2.0
W/C
1.0X1.1
2.40X1.00
LOFT ABOVE
CORRIDOR
4.87X1.84
STAIRCASE
3.10X1.84
UP
OTC
4.96
1.20
1.84
14.16
10.45

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ಸೃಜಿಸಲಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 52 ಸಸಿವಿ 95, ದಿನಾಂಕ 8–8–2005.
2. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 61 ಸಸಿವಿ 2006, ದಿನಾಂಕ 21–8–2006.
3. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 43 ಸಸಿವಿ 2007, ದಿನಾಂಕ 31–8–2007.
4. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 661 ಸಅಸೇ 2008, ದಿನಾಂಕ 19–8–2008.
5. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 464 ಸಅಸೇ 2009, ದಿನಾಂಕ 29–9–2009.
6. ಸರ್ಕಾರದ ಅಪರ ಕಾರ್ಯದರ್ಶಿ (ಅಂತರರಾಜ್ಯ ಜಲ ವಿವಾದ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ ಲಾ 5 ಸಿಡಬ್ಲ್ಯೂಡಿ 2009, ದಿನಾಂಕ 16–8–2010.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿತ್ತು. ತದನಂತರ ಕ್ರಮಸಂಖ್ಯೆ (2)ರಿಂದ (5)ರ ಆದೇಶದಲ್ಲಿ ಈ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಲಾಗಿದೆ. ಮೇಲೆ ಕ್ರಮಸಂಖ್ಯೆ 5ರಲ್ಲಿ ಓದಲಾದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ 29–8–2009 ರಿಂದ ಒಂದು ವರ್ಷದ ಅವಧಿಗೆ ಅಥವಾ ಕಾವೇರಿ, ಕೃಷ್ಣ ಜಲ ವಿವಾದ ನ್ಯಾಯಾಧಿಕರಣ ಮುಕ್ತಾಯವಾಗುವವರೆಗೆ ಹಾಗೂ ಮಹದಾಯಿ ವಿಷಯವು ಇತ್ಯರ್ಥವಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮಸಂಖ್ಯೆ (6) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಕಾವೇರಿ ಜಲ ವಿವಾದ ನ್ಯಾಯಾಧೀಕರಣದ ಅಂತಿಮ ತೀರ್ಪಿನ ಬಗ್ಗೆ ಸಂಬಂಧಪಟ್ಟ ರಾಜ್ಯಗಳು ಸರ್ವೋಚ್ಚ ನ್ಯಾಯಾಲಯದಲ್ಲಿ ಮರು ಪರಿಶೀಲನೆ ಅರ್ಜಿ ಸಲ್ಲಿಸಿರುವ ಪ್ರಯುಕ್ತ ಸದರಿ ಪ್ರಕರಣಗಳು ಸರ್ವೋಚ್ಚ ನ್ಯಾಯಾಲಯದಲ್ಲಿ ಮುಂದುವರೆಯುತ್ತಿರುವುದರಿಂದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಕಾನೂನು ಕೋಶ (ಅಂತರ ರಾಜ್ಯ ಜಲ ವಿವಾದ ಶಾಖೆ) ಇಲ್ಲಿ ಸೃಜಿಸಿ ಮುಂದುವರೆಸಿರುವ 11 ಹುದ್ದೆಗಳನ್ನು ದಿನಾಂಕ 29–8–2010 ರಿಂದ 1 ವರ್ಷದ ಅವಧಿಗೆ ಅಥವಾ ಕಾವೇರಿ/ಕೃಷ್ಣಾ/ಮಹಾದಾಯಿ ಜಲ ವಿವಾದ ಪ್ರಕರಣ ಇತ್ಯರ್ಥವಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸುವಂತೆ ಕೋರಲಾಗಿದೆ.

| | | |
|---|---|---|
| 1) | ಅಪರ ಕಾರ್ಯದರ್ಶಿ | 1 ಹುದ್ದೆ |
| 2) | ಉಪ ಕಾರ್ಯದರ್ಶಿ | 1 ಹುದ್ದೆ |
| 3) | ಶಾಖಾಧಿಕಾರಿ | 1 ಹುದ್ದೆ |
| 4) | ಹಿರಿಯ ಸಹಾಯಕರು | 2 ಹುದ್ದೆಗಳು |
| 5) | ಶೀಘ್ರಲಿಪಿಗಾರರು | 2 ಹುದ್ದೆಗಳು |
| 6) | ಬೆರಳಚ್ಚುಗಾರರು | 2 ಹುದ್ದೆಗಳು |
| 7) | ದಲಾಯತ್ | 1 ಹುದ್ದೆ |
| 8) | ಅಡ್ವೋಕೇಟ್ ಜನರಲ್‌ರವರ ಆಪ್ತ ಸಿಬ್ಬಂದಿ ಶಾಖೆಗೆ ಸೃಜಿಸಲಾಗಿರುವ ಶೀಘ್ರಲಿಪಿಗಾರರ ಹುದ್ದೆ | 1 ಹುದ್ದೆ |
| **ಒಟ್ಟು** | | **11 ಹುದ್ದೆಗಳು** |

ಅದರಂತೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 416 ಸಅಸೇ 2010, ಬೆಂಗಳೂರು, ದಿನಾಂಕ : 30–08–2010**

ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ಸೃಜಿಸಲಾದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 29–8–2010 ರಿಂದ ಒಂದು ವರ್ಷದ ಅವಧಿಗೆ ಅಥವಾ ಕಾವೇರಿ/ಕೃಷ್ಣಾ/ಮಹಾದಾಯಿ ಜಲ ವಿವಾದ ಪ್ರಕರಣಗಳು ಇತ್ಯರ್ಥವಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| | | |
|---|---|---|
| 1) | ಅಪರ ಕಾರ್ಯದರ್ಶಿ | 1 ಹುದ್ದೆ |
| 2) | ಉಪ ಕಾರ್ಯದರ್ಶಿ | 1 ಹುದ್ದೆ |
| 3) | ಶಾಖಾಧಿಕಾರಿ | 1 ಹುದ್ದೆ |
| 4) | ಹಿರಿಯ ಸಹಾಯಕರು | 2 ಹುದ್ದೆಗಳು |
| 5) | ಶೀಘ್ರಲಿಪಿಗಾರರು | 2 ಹುದ್ದೆಗಳು |
| 6) | ಬೆರಳಚ್ಚುಗಾರರು | 2 ಹುದ್ದೆಗಳು |
| 7) | ದಲಾಯತ್ | 1 ಹುದ್ದೆ |
| 8) | ಅಡ್ವೋಕೇಟ್ ಜನರಲ್‌ರವರ ಆಪ್ತ ಸಿಬ್ಬಂದಿ ಶಾಖೆಗೆ ಸೃಜಿಸಲಾಗಿರುವ ಶೀಘ್ರಲಿಪಿಗಾರರ ಹುದ್ದೆ | 1 ಹುದ್ದೆ |
| **ಒಟ್ಟು** | | **11 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎ.ಆರ್. ವಿಜಯಾನಂದ ಶರ್ಮ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–3).

ಪಿ.ಆರ್. 2334

## COMMERCE & INDUSTRIES SECRETARIAT

**Sub :-** GIM – 2010-Follow up action. Constitution of Task Force Committees for Aerospace, Automotive and Textile sectors.

**Read :-** Letter No. D.O. No. KUM/CII/2010-11, dated 21-08-2010.

**Preamble:**

During Global Investors Meet a decision was taken to constitute Task Force Committees with support from CII & FICCI for speedy implementation of the projects approved and attract fresh investments. The CII has submitted a proposal for conducting a process Re – Engineering study and to constitute Task Force Committees, vide their letter dated 30-07-2010 and has suggested the members for Task Force Committees. Commissioner for ID & Director for R & C has submitted his recommendations. The Government has examined the proposal in detail & hence this order.

**Government Order No. CI 438 SPI 2010, Bangalore, dated : 02-09-2010**

In the circumstances explained above to ensure the speedy implementation of projects approved during Global Investors Meet and to attract fresh investment, the Task Force-Committees for Aerospace, Automotive and Textile are constituted as follows :

**I. TASK FORCE AEROSPACE**.

1) Chairman-Commissioner, Industrial Development, Government of Karnataka.
2) Vice Chairman and Convener-Chairman, CII, Karnataka/Vice-Chairman, CII, Karnataka.

**Members :**

1) Mr. A.K. Saxena, Director, UK Advanced Engineering (ADS).
2) Representative from Aerospace Practice, Price Waterhouse Coopers.
3) Representatives from Honeywell, BEL, EADS, Dynamatics, HAL, KUM, Antrix Corp, NAL.
4) Air Marshall T.J. Master [Regd.] – Master Aerospace Consultants Pvt., Ltd.
5) Managing Director, Karnataka Skills & Vocational Training Development Corporation.

**II. TASK FORCE AUTOMOTIVE**.

1) Chairman-Principal Secretary, C & I, Government of Karnataka.
2) Vice Chairman - Chairman, CII, Karnataka/Vice-Chairman, CII, Karnataka.

**Members :**

1) Mr. T. Parabrahman, MD, Kirloskar Toyoda Textile Machinery Mfg. Company Ltd.
2) Mr. M. Lakshminarayan, MD, Harman India Pvt. Ltd.,
3) Mr. Sekhar Viswanathan, President, BCIC.
4) Mr. F.K. Singhvi, JMD, Sansera Ltd.,
5) Representatives from Bosch Ltd., FKCCI, KUM.
6) Prof. Rishikesha Krishnan, IIM Bangalore.

**III. TASK FORCE TEXTILE.**

1) Chairman-Secretary to Govt. C & I Dept. Vice Chairman – FICCI. Official.

**Members :**

1) Commissioner, Textile.
2) Managing Director, KHDC.
3) Managing Director, KSPDCL.
4) FICCI representative.

By Order and in the name of the Governor of Karnataka

(**A.V. SRINIVASA DIKSHIT**)

Desk Officer (Technical Cell)

Commerce & Industries Department.

P.R. 2335

## COMMERCE & INDUSTRIES SECRETARIAT

**Sub :-** Constitution of Rehabilitation and Resettlement (R & R) Committee for the project displaced families from the Strategic Crude Oil Project at Padur.

**Read :-** 1. Govt. Order No. CI 315 SPI 2008, dated 21-10-2008.
2. Letter No. ISPRL/PD/RPA/3/(VOL-II) dated : 27-07-2010 from Chief Executive Officer, ISPRL Delhi.
3. Letter No. KIADB/Spl. DC/La/1915(2) /7454/2009-10, dated 4-8-2010 from CEO & EM, KIADB.

**Preamble:**

The Government of Karnataka vide order No. CI 315 SPI 2008, Bangalore dated : 21.10.2008 read at (1) above has approved the proposal for establishment of a unit of "Strategic storage of Crude Oil" by M/s. Indian Strategic Petroleum Reserves Ltd., at Padur and Heruru Village, Udupi District. Consequent on acquisition of 160.755 acres of land at Padur and Heruru Villages in Udupi District, by KIADB for this project, a R and R package is required to be implemented for the displaced families, as per the National Rehabilitation and Resettlement Policy 2007. therefore the Indian Strategic Petroleum Reserves Limited vide letter (2) and Chief Executive Officer & Executive Member, Karnataka Industrial Area Development Board vide letter (3) have requested the State

Government to constitute a Committee under the Chairmanship of the Deputy Commissioner, Udupi District, for implementation of the R and R Package.

Hence the following Order.

**Government Order No. CI 459 SPQ 2010, Bangalore, dated : 30-08-2010**

The Government is pleased to approve the constitution of a Rehabilitation and Resettlement (R & R) Committee for rehabilitation of displaced families an account of their losing lands for the Strategic Crude Oil Project at Padur, Udupi District as detailed below.

| | | |
|---|---|---|
| 1. | Deputy Commissioner, Udupi District | Chairman |
| 2. | Joint Director, District Industries Centre, Udupi District. | Member |
| 3. | Development Officer, KIADB | Member |
| 4. | ISPRL Officer | Member Convener |

This committee is authorized to co-opt any other person as associate member.

By Order and in the name of the Governor of Karnataka

(**K.H. SESHAGIRI**)

P.R. 2336

Under Secretary to Government (I.D.)
Commerce & Industries Department.

## ತೋಟಗಾರಿಕೆ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆಯ ಯಲಚೇನಹಳ್ಳಿ ತೋಟಗಾರಿಕೆ ಕ್ಷೇತ್ರದ ಹಾಗೂ ಉಡುಪಿ ಜಿಲ್ಲೆಯ ರಾಮಸಮುದ್ರ ತೋಟಗಾರಿಕೆ ಕ್ಷೇತ್ರಗಳಲ್ಲಿ ತಲಾ 50 ಎಕರೆ ಪ್ರದೇಶವನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**
1. ಕುಲಪತಿಗಳು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆರವರ ಪತ್ರ ಸಂಖ್ಯೆ ಕುಲಪತಿಗಳು/ತೋವಿವಿಬಾ/4520/2010–11, ದಿನಾಂಕ 11–08–2010.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ ತೋಇ/ತೋಅನಿ (ಕ್ಷೇ/ಸ)/ಸತೋಅ2/27/ 2008–09, ದಿನಾಂಕ 02–08–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪ್ರಸ್ತಾವನೆಯಲ್ಲಿ ಕುಲಪತಿಗಳು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆರವರು 2010–11 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯ ಮಂತ್ರಿಯವರು ಘೋಷಿಸಿದಂತೆ ಮೈಸೂರಿನಲ್ಲಿ ಹೊಸದಾಗಿ ತೋಟಗಾರಿಕೆ ವಿಶ್ವವಿದ್ಯಾಲಯವನ್ನು ರೇಷ್ಮೆ ಇಲಾಖೆಗೆ ಸೇರಿದ 9 ಎಕರೆ ಜಮೀನು ಕೆಲವೊಂದು ಕಟ್ಟಡಗಳನ್ನು ತಾತ್ಕಾಲಿಕವಾಗಿ 2 ವರ್ಷಗಳ ಅವಧಿಗೆ ಮಾತ್ರ ಪಡೆದು ಪ್ರಾರಂಭಿಸಲಾಗಿದೆ. ತೋಟಗಾರಿಕೆ ಮಹಾ ವಿದ್ಯಾಲಯದ ಕಟ್ಟಡ, ವಿದ್ಯಾರ್ಥಿಗಳ ವಸತಿ ನಿಲಯ, ಸಿಬ್ಬಂದಿಗಳ ವಸತಿ ಗೃಹಗಳು, ಅತಿಥಿ ಗೃಹಗಳು, ವಿದ್ಯಾರ್ಥಿಗಳ ಪ್ರಾಯೋಗಿಕ ತಾಕುಗಳು, ಮಹಾ ವಿದ್ಯಾಲಯದ 8 ಪ್ರಸ್ತುತ ವಿಭಾಗಗಳಾದ ಹಣ್ಣು ವಿಭಾಗ, ತರಕಾರಿ ವಿಭಾಗ, ಬೀಜೋತ್ಪಾದನೆ ವಿಭಾಗ, ಪುಷ್ಪ ಕೃಷಿ ವಿಭಾಗ, ತೋಟಗಾರಿಕೆ ಸಂಸ್ಕರಣಾ ವಿಭಾಗಗಳಿಗೆ ಹಾಗೂ ಇನ್ನಿತರ ವಿಭಾಗಗಳ ವಿಜ್ಞಾನಿಗಳಿಗೆ ಸಂಶೋಧನೆ ಕೈಗೊಳ್ಳಲು ಹೆಚ್ಚಿನ ಸ್ಥಳ ಬೇಕಾಗಿರುವುದರಿಂದ ದಿನಾಂಕ 10–08–2010 ರಂದು ನಡೆದ ವ್ಯವಸ್ಥಾಪನಾ ಮಂಡಳಿಯ ಸಭೆಯ ತೀರ್ಮಾನದಂತೆ ಮೈಸೂರಿನ ಯಲಚೇನ ಹಳ್ಳಿ ತೋಟಗಾರಿಕೆ ಕ್ಷೇತ್ರದಲ್ಲಿ ಈಗಾಗಲೇ 50.00 ಎಕರೆ ಜಮೀನನ್ನು ಮಂಜೂರು ಮಾಡಿದ್ದು, ಇದರಲ್ಲಿ ತೋಟಗಾರಿಕೆ ಮಹಾ ವಿದ್ಯಾಲಯವು ಪೂರ್ಣ ಪ್ರಮಾಣದಲ್ಲಿ ಕೆಲಸ ನಿರ್ವಹಿಸಲು ಸಾಕಾಗದಿರುವುದರಿಂದ ಉಳಿಕೆ ಕ್ಷೇತ್ರದಲ್ಲಿ ಹೆಚ್ಚುವರಿಯಾಗಿ 50.00 ಎಕರೆ ಜಮೀನನ್ನು ಬಾಗಲಕೋಟೆ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (2)ರ ಪ್ರಸ್ತಾವನೆಯಲ್ಲಿ ತೋಟಗಾರಿಕೆ ನಿರ್ದೇಶಕರು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯವು ಮೈಸೂರಿನಲ್ಲಿ ಹೊಸದಾಗಿ ತೋಟಗಾರಿಕೆ ಮಹಾ ವಿದ್ಯಾಲಯವನ್ನು ಸ್ಥಾಪಿಸುತ್ತಿದ್ದು, ಅದಕ್ಕೆ ಪೂರಕವಾದ ಸಂಶೋಧನೆ ಕೈಗೊಳ್ಳಲು ಯಲಚೇನಹಳ್ಳಿ ತೋಟಗಾರಿಕೆ ಕ್ಷೇತ್ರದಲ್ಲಿ 50.00 ಎಕರೆ ಜಮೀನನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ಹಸ್ತಾಂತರಿಸಲು ದಿನಾಂಕ 10–06–2010 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ KSHDA ಯ ನಾಲ್ಕನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ತೀರ್ಮಾನಿಸಿದಂತೆ ಹಾಗೂ ದಿನಾಂಕ 02–11–2009 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ KSHDA ಯ 3ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ತೀರ್ಮಾನಿಸಿದಂತೆ ಉಡುಪಿ ಜಿಲ್ಲೆಯ ರಾಮಸಮುದ್ರ ತೋಟಗಾರಿಕೆ ಕ್ಷೇತ್ರದ 50.00 ಎಕರೆ ಪ್ರದೇಶವನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆರವರಿಗೆ ಹಸ್ತಾಂತರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಎರಡು ಪ್ರಸ್ತಾವನೆಗಳನ್ನು ಪರಿಶೀಲಿಸಿ ತೋಟಗಾರಿಕೆ ಇಲಾಖೆಯ ಜಮೀನನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ಹಸ್ತಾಂತರಿಸುವ ಬಗ್ಗೆ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 391 ತೋಇವಿ 2010, ಬೆಂಗಳೂರು, ದಿನಾಂಕ : 02–09–2010**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆಯ ಯಲಚೇನಹಳ್ಳಿ ತೋಟಗಾರಿಕೆ ಕ್ಷೇತ್ರದ 50.00 ಎಕರೆ ಜಮೀನನ್ನು ಮೈಸೂರು ತೋಟಗಾರಿಕೆ ಮಹಾ ವಿದ್ಯಾಲಯದ ಸ್ಥಾಪನೆ ಮತ್ತು ಶೈಕ್ಷಣಿಕ ಕಾರ್ಯಚಟುವಟಿಕೆಗಾಗಿ ಹಾಗೂ ಉಡುಪಿ ಜಿಲ್ಲೆಯ ರಾಮಸಮುದ್ರ ತೋಟಗಾರಿಕೆ ಕ್ಷೇತ್ರದ 50.00 ಎಕರೆ ಜಮೀನನ್ನು ಕುಲಪತಿಗಳು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರಿಗೆ ವಿಶ್ವವಿದ್ಯಾಲಯದ ಚಟುವಟಿಕೆಗಳಿಗಾಗಿ ಹಾಗೂ ICAR ಚಟುವಟಿಕೆ ಕೈಗೊಳ್ಳುವ ಸಲುವಾಗಿ ಹಸ್ತಾಂತರಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಉಮಾ ಕೆ.),**

ಪಿ.ಆರ್. 2337

ಪೀಠಾಧಿಕಾರಿ (ಪ್ರಭಾರ), ತೋಟಗಾರಿಕೆ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಗಣೇಶ್ ರಾವ್, ಎ.ಪಿ.ಸಿ.–2380, ಸಿ.ಎ.ಆರ್. (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರ), ಬೆಂಗಳೂರು, ಇವರ ಆದೇಶ ಸಂಖ್ಯೆ : ಡಿಇ/24/ಸಿಎಆರ್ (ಕೇ) 2007–08, ದಿನಾಂಕ 07–08–2008.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, ಸಿ.ಎ.ಆರ್. ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ : 11/ಅಪೀಲು–2/2008, ದಿನಾಂಕ 05–12–2008, 09.02.2009 ಮತ್ತು 14–6–2010.
3. ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 17–4–09.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2) 14/2009–10, ದಿನಾಂಕ 27–6–2010.

**ಪ್ರಸ್ತಾವನೆ :**

ಶ್ರೀ ಗಣೇಶ್‌ರಾವ್, ಎ.ಪಿ.ಸಿ–2380, ಸಿ.ಎ.ಆರ್. (ಕೇಂದ್ರ) ಬೆಂಗಳೂರು, ಇವರು ಬೆಂಗಳೂರಿನ ಮಡಿವಾಳ ಪೊಲೀಸ್ ಠಾಣೆಯಲ್ಲಿ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಎ.ಪಿ.ಸಿ. **619,** ಶ್ರೀ ಗಣೇಶ್‌ರಾವ್, ವಾಹನ ವಿಭಾಗ, ಸಿ.ಎ.ಆರ್. ಕೇಂದ್ರ, ಬೆಂಗಳೂರು, ಆದ ನೀವು ಮಧ್ಯಪಾನ ಮಾಡಿ ದಿನಾಂಕ 29–06–2006 ರಂದು ಕಾರ್ಪೆಂಟರ್ ಕೆಲಸ ಮಾಡುವ ಶ್ರೀ ಲೋಥಸ್ ಮತ್ತು ಅವರ ಸ್ನೇಹಿತರನ್ನು ಮಧ್ಯಾಹ್ನ ಸುಮಾರು 01–00 ಗಂಟೆಯ ಸಮಯದಲ್ಲಿ ತಳ್ಳುವ ಗಾಡಿಯಲ್ಲಿ ಊಟವನ್ನು ಮಾಡಿಕೊಂಡು ವಾಪಸ್ಸು ಕೆಲಸಕ್ಕೆ ಹೋಗುವ ಸಮಯದಲ್ಲಿ ರಾಜರಾಜೇಶ್ವರಿ ನಗರದ ಮುಖ್ಯರಸ್ತೆ ಪೆಟ್ರೋಲ್ ಬಂಕ್ ಬಳಿ ಹಾದು ಹೋಗುತ್ತಿದ್ದು ಶ್ರೀ ಮಹೇಶ್ ರವರ ಕೈ ನಿಮಗೆ ತಾಗಿದ್ದರಿಂದ (ಕೈ ಟಚ್ ಆದ್ದರಿಂದ) ಅವರಿಗೆ ಅವಾಚ್ಯ ಶಬ್ದಗಳಿಂದ ಬೈದು ಚಪ್ಪಲಿ ಕಾಲಿನಿಂದ ಒದ್ದು, ಗಾಯಗೊಳಿಸಿ, ಬೆದರಿಸಿ ಅಶಿಸ್ತನ್ನು ಪ್ರದರ್ಶಿಸಿದ್ದು ಪೊಲೀಸ್ ಪೇದೆಯ ಕರ್ತವ್ಯಕ್ಕೆ ತರವಲ್ಲದ ರೀತಿಯಲ್ಲಿ ನಡೆದುಕೊಂಡಿರುತ್ತೀರಿ.

ಸಾರ್ವಜನಿಕ ಸೇವಕರಾಗಿ, ಶಿಸ್ತಿನ ಇಲಾಖೆಯಲ್ಲಿದ್ದು, ಸಾರ್ವಜನಿಕರ ಆಸ್ತಿ–ಪಾಸ್ತಿಗಳ ರಕ್ಷಿಸಬೇಕಾದ ಸರ್ಕಾರದ ಜವಾಬ್ದಾರಿಯುತ ಪೊಲೀಸ್ ನೌಕರರೆಂಬ ಕರ್ತವ್ಯವನ್ನು ಮರೆತು ನೀವು ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ, ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ ಹಾಗೂ ಪೊಲೀಸ್ ಇಲಾಖೆಯ ಶಿಸ್ತು, ನಿಯಮ, ಗೌರವಕ್ಕೆ ಧಕ್ಕೆ ಬರುವಂತೆ ವರ್ತಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ, (ಕೇಂದ್ರ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ 07–08–2008 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರು ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, ಸಿ.ಎ.ಆರ್. ಬೆಂಗಳೂರು, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಮೇಲ್ಮನವಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಿ, ಇವರ ವೇತನವನ್ನು ಪಿ.ಸಿ. ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಎರಡು ವರ್ಷಗಳ ಕಾಲ ಇಳಿಸಲಾಗಿದೆ. ಎರಡು ವರ್ಷಗಳ ನಂತರ ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ನೀಡುವುದು ಸೇವೆಯಿಂದ ಹೊರಗುಳಿದ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 05–12–08, 09–02–2009 ಮತ್ತು 14–6–10 ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 95 ಪೊಸಿಅ 2009, ಬೆಂಗಳೂರು, ದಿನಾಂಕ : 31–08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗಣೇಶ್‌ರಾವ್, ಎ.ಪಿ.ಸಿ.–2380, ಸಿ.ಎ.ಆರ್. (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ.ಎನ್. ರವಿಪ್ರಕಾಶ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 2338

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಕೆ. ನಂಜಪ್ಪ, ಎ.ಪಿ.ಸಿ.–566, ರಾಜ್ಯ ಗುಪ್ತವಾರ್ತೆ, ವಾಹನ ವಿಭಾಗ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 9ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು, ಇವರ ಆದೇಶ ಸಂಖ್ಯೆ : ಸಿಬ್ಬಂದಿ (1)/4 2000–01, ದಿನಾಂಕ 31–08–2000.
2. ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 21–01–10.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2) 83/2009–10, ದಿನಾಂಕ 16–6–2010.

**ಪ್ರಸ್ತಾವನೆ :**

ಶ್ರೀ ಬಿ.ಕೆ. ನಂಜಪ್ಪ, ಎ.ಪಿ.ಸಿ.–566, ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಇವರು 9ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಪೇದೆ ಸಂಖ್ಯೆ 566, ಬಿ.ಕೆ. ನಂಜಪ್ಪ, ಆದ ನೀವು ದಿನಾಂಕ 04–02–2000ರ ಅಪರಾಹ್ನದಿಂದ 08.02.2000 ರವರೆಗೆ ನಾಲ್ಕುವರೆ ದಿನಗಳ ಸಾಂದರ್ಭಿಕ ರಜೆ ಪಡೆದುಕೊಂಡು ದಿನಾಂಕ 09–02–2000 ರಿಂದ ಈವರೆಗೆ ರಜೆ ಮೀರಿ ಅನಧಿಕೃತವಾಗಿ ಗೈರು ಹಾಜರಾಗಿರುವಿರಿ. ಅದೇ ರೀತಿ ನೀವು ಕರ್ತವ್ಯದಲ್ಲಿ ಅನಧಿಕೃತವಾಗಿ ಗೈರು ಹಾಜರಾಗುವುದು ಹಾಗೂ ರಜೆ ಮೀರಿ ನಿಲ್ಲುವುದು, ರೂಡಿ ಮಾಡಿಕೊಂಡಿರುವಿರಿ. ದಿನಾಂಕ 14–4–97 ರಿಂದ 18–4–97 5 ದಿನಗಳ ಗೈರು ಹಾಜರಾಗಿರುವಿರಿ. 5–6–97 ರಿಂದ 9–6–97 ರವರೆಗೆ ಗೈರು ಹಾಜರಾಗಿರುವಿರಿ. 5–8–97 ಹಾಗೂ 6–8–97 2 ದಿನಗಳ ಸಾಂದರ್ಭಿಕ ರಜೆ ಪಡೆದು 3–11–97 ರಂದು ರಜೆ ಮೀರಿ ನಿಂತಿರುವಿರಿ. 11–3–98 ಹಾಗೂ 12–3–98 ಸಾಂದರ್ಭಿಕ ರಜೆ ಪಡೆದು ದಿನಾಂಕ 13–3–98 ರಿಂದ 27–5–98 ರವರೆಗೆ ರಜೆ ಮೀರಿ ನಿಂತಿರುವಿರಿ ಹಾಗೂ ಕರ್ತವ್ಯದಲ್ಲಿ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಕಮಾಂಡೆಂಟ್, 9ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ 31–08–2000 ರ ಆದೇಶದಲ್ಲಿ ಅರ್ಜಿದಾರರ ಮೂರು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ. ದಿನಾಂಕ 09–02–2000 ರಿಂದ 28–6–2000 ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 24 ಪೊಸಿಅ 2010, ಬೆಂಗಳೂರು, ದಿನಾಂಕ : 31–08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಕೆ. ನಂಜಪ್ಪ, ಎ.ಪಿ.ಸಿ.–566, ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ.ಎನ್. ರವಿಪ್ರಕಾಶ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 2339

## FINANCE SECRETARIAT

**Sub :-** Introduction of an Incentive Scheme for better enforcement of Karnataka Excise Act, 1965 and the Rules made thereunder.

**Read :-** 1. G.O. No. FD 47 EAA 2003, dated 11-9-2003.
2. Letter No. ECC 23 CRM 2003 dated 29-12-2010 & 04-03-2010.

**Preamble:**

In the Government Order read at (1) above an Incentive Scheme has been introduced for better enforcement of Karnataka Excise Act 1965 and the Rules made thereunder. Under this scheme all Government employees and members of public are eligible to receive the Incentive amount as decided by the sanctioning authority as detailed at Sl.No. 2 of the said Government Order under the title "Incentive Amount Payable" on the value of the excisable goods seized. The Excise Commissioner in his letter read at (2) above has suggested for change of the word "seized" mentioned under the above said title, as "Confiscated" for the reason that the seized goods may be released on technical grounds. If the excisable goods are "Confiscated" which would become Government property, then only the Government employee and the members of public could be made eligible to receive the incentive amount. The issue has been examined. Hence the following Order.

**Government Order No. FD 55 EAA 2008, Bangalore, dated : 23-08-2010**

In the above circumstances, it is hereby ordered that the incentive as per item 2 of G.O. No. FD 47 EAA 2003 dated 11-09-2003 will be admissible only in the case of excisable goods which are confiscated.

2. However, the other items in Government Order No. FD 47 EAA 2003 dated 11.09.2003 will continue to be in force.

By Order and in the name of the Governor of Karnataka

(**S.G. NARAYANA**),
Under Secretary to Government,
Finance Department (Excise).

P.R. 2340

## ಶಿಕ್ಷಣ ಸಚಿವಾಲಯ

**ವಿಷಯ :** ರಾಜ್ಯ ಪಠ್ಯಕ್ರಮದ ಸಮಗ್ರ ಪರಿಷ್ಕರಣೆ ಹಾಗೂ ಪಠ್ಯಪುಸ್ತಕದ ರಚನಾ ಕಾರ್ಯಕ್ರಮಕ್ಕೆ ಸಂಯೋಜಕರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಡಿ 15 ಯೋಯೋಕ 2010, ದಿನಾಂಕ : 23–01–2010.
**2.** ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ವಿಶೇಷ ಕರ್ತವ್ಯಾಧಿಕಾರಿಗಳ ದಿನಾಂಕ : 02–08–2010ರ ಟಿಪ್ಪಣಿ ಸಂಖ್ಯೆ : ಪ್ರಾ.ಪ್ರೌ.ಶಿ.ಸ./ಓಎಸ್‌ಡಿ/708/2010.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ ಓದಲಾದ (1)ರ ಎನ್.ಸಿ.ಎಫ್.–2005ರ ಮಾರ್ಗಸೂಚಿಯಂತೆ ರಾಜ್ಯ ಪಠ್ಯಕ್ರಮದ ಸಮಗ್ರ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನಾ ಕಾರ್ಯಕ್ರಮಗಳ ಮೇಲ್ವಿಚಾರಣೆ ಹಾಗು ಇಲಾಖೆ ಮತ್ತು ಸರ್ಕಾರದೊಂದಿಗೆ ಸಂಯೋಜನೆ ಮಾಡಲು ಶ್ರೀ ಜಿ.ಎಸ್. ಮುಡಂಬಡಿತ್ತಾಯ, ನಿವೃತ್ತ ಜಂಟಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರನ್ನು ಸಂಯೋಜಕರನ್ನಾಗಿ ನೇಮಿಸಿ ದಿನಾಂಕ : 01–02–2010 ರಿಂದ ಆರು ತಿಂಗಳ ಅವಧಿಗೆ ಆದೇಶ ಹೊರಡಿಸಲಾಗಿತ್ತು.

2. ಮೇಲೆ ಓದಲಾದ (2)ರ ಟಿಪ್ಪಣಿಯಲ್ಲಿ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ವಿಶೇಷ ಕರ್ತವ್ಯಾಧಿಕಾರಿಗಳು ಎನ್.ಸಿ.ಎಫ್.–2005ರ ಮಾರ್ಗಸೂಚಿಯಂತೆ ರಾಜ್ಯ ಪಠ್ಯಕ್ರಮದ ಸಮಗ್ರ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನಾ ಕಾರ್ಯಕ್ರಮಗಳ ಮೇಲ್ವಿಚಾರಣೆ ಹಾಗೂ ಇಲಾಖೆ ಮತ್ತು ಸರ್ಕಾರದೊಂದಿಗೆ ಸಂಯೋಜನೆ ಮಾಡಲು ಶ್ರೀ ಜಿ.ಎಸ್.ಮುಡಂಬಡಿತ್ತಾಯ, ನಿವೃತ್ತ ಜಂಟಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರನ್ನು ಸಂಯೋಜಕರನ್ನಾಗಿ ನೇಮಿಸಲಾಗಿದ್ದು, ಸದರಿಯವರ ಅವಧಿಯು ದಿನಾಂಕ : 31–07–2010ಕ್ಕೆ ಮುಗಿದಿರುವುದರಿಂದ ದಿನಾಂಕ : 01–08–2010 ರಿಂದ 31–03–2011 ರವರೆಗೆ ಮುಂದುವರೆಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

3. ಸದರಿ ಪ್ರಸ್ತಾವನೆ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ : 15 : ಯೋಯೋಕ 2010, ಬೆಂಗಳೂರು, ದಿನಾಂಕ: 27.08.2010**

**4.** ಎನ್.ಸಿ.ಎಫ್.–2005ರ ಮಾರ್ಗಸೂಚಿಯಂತೆ ರಾಜ್ಯ ಪಠ್ಯಕ್ರಮದ ಸಮಗ್ರ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನಾ ಕಾರ್ಯದ ಮೇಲ್ವಿಚಾರಣೆ ಮಾಡಲು ಸಂಯೋಜಕರನ್ನಾಗಿ (ಗುತ್ತಿಗೆ ಆಧಾರದ ಮೇಲೆ) ದಿನಾಂಕ : 01–08–2010 ರಿಂದ 31–03–2011ರ ಅವಧಿಗೆ ಶ್ರೀ ಜಿ.ಎಸ್. ಮುಡಂಬಡಿತ್ತಾಯ, ನಿವೃತ್ತ ಜಂಟಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರನ್ನು ನೇಮಕ ಮಾಡಿ ಮುಂದುವರೆಸಲಾಗಿದೆ.

5. ಸದರಿಯವರಿಗೆ ಮೇಲ್ಕಂಡ ಅವಧಿಗೆ ಮಾಹೆಯಾನ 10,000 ರೂ.ಗಳಂತೆ ಪಠ್ಯಪುಸ್ತಕ ಸಂಘಕ್ಕೆ ಒದಗಿಸಿರುವ ಅನುದಾನದ ಮಿತಿಯೊಳಗೆ ಭರಿಸುವಂತೆ ಸೂಚಿಸಲಾಗಿದೆ.

6. ಸದರಿಯವರಿಗೆ ಸಚಿವಾಲಯ ಸಿಬ್ಬಂದಿ ಮತ್ತು ವಾಹನ ಸೌಲಭ್ಯವನ್ನು ಡಿ.ಎಸ್.ಎ.ಆರ್.ಟಿ. ಕಟ್ಟಡದಲ್ಲಿ ಕರ್ನಾಟಕ ಪಠ್ಯಪುಸ್ತಕ ಸಂಘವು ಒದಗಿಸುವುದು.

7. ಸದರಿಯವರು ನಿರ್ವಹಿಸಬೇಕಾದ ಕಾರ್ಯಗಳನ್ನು ವ್ಯವಸ್ಥಾಪಕ ನಿರ್ದೇಶಕರು, ಪಠ್ಯಪುಸ್ತಕ ಸಂಘ ಇವರು ಗುರುತಿಸಿ ಇವರಿಗೆ ವಹಿಸತಕ್ಕದ್ದು.

8. ಸದರಿಯವರು ತಿಂಗಳಿಗೊಮ್ಮೆ ಪಠ್ಯಪುಸ್ತಕ ರಚನೆ ಬಗ್ಗೆ ಆಗುತ್ತಿರುವ ಪ್ರಗತಿಯನ್ನು ಸರ್ಕಾರಕ್ಕೆ ವರದಿ ಮಾಡುವಂತೆ ಸೂಚಿಸಲಾಗಿದೆ.

9. ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ : ಶಿಇ ಐಎಫ್(ಬಿ&ಎ) 2010, ದಿನಾಂಕ : 08–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. ನಂ. 2358

## ಆರ್ಥಿಕ ಸಚಿವಾಲಯ

**ವಿಷಯ** : ಶ್ರೀ ಹೆಚ್.ಜಿ.ರಾಜಣ್ಣ ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ** :
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಎಂ–25/ಸಿಆರ್–10/2009, ಮಂಗಳೂರು, ದಿನಾಂಕ : 29–07–2010.
2. ತನಿಖಾಧಿಕಾರಿಯವರ ವರದಿ ದಿನಾಂಕ : 22–04–2010.
3. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಶ್ರೀ ಹೆಚ್.ಜಿ.ರಾಜಣ್ಣ ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ಗುನ್ನೆ ಸಂಖ್ಯೆ : 10/2009ರಲ್ಲಿ ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಮಂಗಳೂರು, ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ : (1)ರ ಪತ್ರ ದಿನಾಂಕ : 29–07–2010 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಸಿ) ರಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ : 29–07–2010ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1. ಶ್ರೀ ಪದ್ಮನಾಭಗೌಡ, ವಯಸ್ಸು 33 ವರ್ಷ, ತಂದೆ ಪೂವಪ್ಪಗೌಡ, ವಾಸ : ಪದಕ ಮನೆ, ಕಾಂಚನ, ಬಜತ್ತೂರು ಗ್ರಾಮ & ಅಂಚೆ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ, ರವರ ದೂರು ದಿನಾಂಕ : 04–11–2009.
2. ಪ್ರಥಮ ವರ್ತಮಾನ ವರದಿ : ಮಂಗಳೂರು ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣದ ಸಂಖ್ಯೆ : 10/2009.
3. ಪ್ರಾಯೋಗಿಕ ಪಂಚನಾಮೆ ದಿನಾಂಕ : 03–11–2009.
4. ಟ್ರ್ಯಾಪ್‌ನ ಮಹಜರ್ ದಿನಾಂಕ : 03–11–2009.
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ : ಆರ್‌ಎಸಿಇ/ಲೋಕ್–01/2010–11 ದಿನಾಂಕ : 22–01–2010.
6. ಕೃತ್ಯ ನಡೆದ ಸ್ಥಳದ ನಕಾಶೆ.
7. **ಸಾಕ್ಷಿ ಹೇಳಿಕೆಗಳ ಪಟ್ಟಿ :**
   1. ಶ್ರೀ ಪದ್ಮನಾಭ ಗೌಡ, ಫಿರ್ಯಾದಿ.
   2. ಶ್ರೀ ಕೆ.ಸೀತಾರಾಮ, ದ್ವಿ.ದ.ಸ. ತಾಲ್ಲೂಕು ಕಛೇರಿ, ಮಂಗಳೂರು.
   3. ಶ್ರೀ ಹರೀಶ್ ಕೆ. ಗ್ರಾಮಕರಣಿಕರು, ಆಹಾರ ವಿಭಾಗ, ತಾಲ್ಲೂಕು ಕಛೇರಿ, ಮಂಗಳೂರು.
   4. ಶ್ರೀ ದಿವಾಕರ್ ಶೆಟ್ಟಿ, ಮಂಗಳೂರು.
   5. ಶ್ರೀ ವಿಜಯಕುಮಾರ್, ಖಾಸಗಿ ಅಕೌಂಟೆಂಟ್, ಪುತ್ತೂರು ತಾಲ್ಲೂಕು.
   6. ಶ್ರೀ ಅಬ್ಬಾಸ್ ಕೆ. ಖಾಸಗಿ ತೆರಿಗೆ ಸಲಹೆಗಾರರು, ಸೂಳ್ಯ.
   7. ಶ್ರೀ ಕೆ.ತಿಮ್ಮಪ್ಪಗೌಡ, ಆರ್ಯಾಪು ಗ್ರಾಮ, ಪುತ್ತೂರು ತಾಲ್ಲೂಕು.
   8. ಶ್ರೀಮತಿ ಭಾರತಿ ಬಿ.ಕೆ. ವಾಣಿಜ್ಯ ತೆರಿಗೆ ಪರಿವೀಕ್ಷಕರು, ಪುತ್ತೂರು.
   9. ಶ್ರೀ ರಾಮಚಂದ್ರ ಭಟ್, ದ್ವಿ.ದ.ಸ. ವಾಣಿಜ್ಯ ತೆರಿಗೆ ಇಲಾಖೆ, ಪುತ್ತೂರು.

10. ಶ್ರೀಮತಿ ಪಾರ್ವತಿ ರಾವ್, ದ್ವಿ.ದ.ಸ. ವಾಣಿಜ್ಯ ತೆರಿಗೆ ಇಲಾಖೆ, ಪುತ್ತೂರು.
11. ಶ್ರೀ ಅಣ್ಣಪ್ಪ ಬಿ.ಕೆ., ದ್ವಿ.ದ.ಸ., ವಾಣಿಜ್ಯ ತೆರಿಗೆ ಇಲಾಖೆ, ಪುತ್ತೂರು.
12. ಶ್ರೀಮತಿ ವೀಣಾ ಪಿ.ಎಂ., ದ್ವಿ.ದ.ಸ., ವಾಣಿಜ್ಯ ತೆರಿಗೆ ಇಲಾಖೆ, ಪುತ್ತೂರು.
13. ಶ್ರೀ ಕೆ.ಬಾಬು, ಮ್ಯಾನೇಜರ್, ವಾಣಿಜ್ಯ ತೆರಿಗೆ ಇಲಾಖೆ, ಪುತ್ತೂರು.
14. ಶ್ರೀ ಉಮೇಶ್, ಗ್ರೂಪ್-ಡಿ, ವಾಣಿಜ್ಯ ತೆರಿಗೆ ಇಲಾಖೆ, ಪುತ್ತೂರು.
15. ಶ್ರೀ ಶಿವರಾಮ, ಫಿರ್ಯಾದುದಾರರ ತಮ್ಮ.
16. ಶ್ರೀ ಚಂದ್ರಶೇಖರಯ್ಯ, ಜ್ಯೂನಿಯರ್ ಎಂಜಿನಿಯರ್, ಲೋಕೋಪಯೋಗಿ ಇಲಾಖೆ, ಪುತ್ತೂರು ವಿಭಾಗ.
17. ಶ್ರೀ ಶಾಂತಪ್ಪ ಎಂ. ಹೆಡ್ ಕಾನ್ಸ್‌ಸ್ಟೇಬಲ್, ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
18. ಶ್ರೀಮತಿ ಸುಮತಿ, ಮ.ಪಿ.ಸಿ. ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
19. ಶ್ರೀ ಲ್ಯೂಕೋಸ್ ಕೆ.ಕೆ., ಪಿ.ಸಿ., ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
20. ಶ್ರೀ ಶಿವಪ್ರಸಾದ್ ಎಸ್.ವಿ., ಪಿ.ಸಿ., ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
21. ಶ್ರೀ ಲಕ್ಷ್ಮೀಕಾಂತ, ಪಿ.ಸಿ., ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
22. ಶ್ರೀ ಸುದರ್ಶನ್, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
23. ಶ್ರೀ ಬಾಬು, ಎ.ಪಿ.ಸಿ., ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
24. ಶ್ರೀ ಶಿವಣ್ಣ, ಎ.ಪಿ.ಸಿ., ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
25. ಆಪಾದಿತರಾದ ಶ್ರೀ ಹೆಚ್.ಜಿ.ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಸ್ವ-ಇಚ್ಛಾ ಹೇಳಿಕೆ.

ಫಿರ್ಯಾದುದಾರರು ಉಪ್ಪಿನಂಗಡಿಯಲ್ಲಿ ಬಟ್ಟೆ ಅಂಗಡಿ ಇಟ್ಟುಕೊಂಡಿದ್ದು, ಈ ಅಂಗಡಿಯ ಟಿನ್ ನಂಬರಿಗೆ ಉಪ ಶಾಖೆಯಾಗಿ ಟೀ ಪುಡಿ ವ್ಯಾಪಾರ ನಡೆಸಲು ಡೆಲಿವರಿ ನೋಟಿಗೆ ದಿನಾಂಕ : 20-10-2009 ರಂದು ಪುತ್ತೂರು ವಾಣಿಜ್ಯ ತೆರಿಗೆ ಕಛೇರಿಗೆ ಅರ್ಜಿ ಹಾಗೂ ಪೂರಕ ದಾಖಲೆಗಳನ್ನು ಸಲ್ಲಿಸಿ, ಡೆಲಿವರಿ ನೋಟಿನ ಬಗ್ಗೆ ಶ್ರೀ ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ವಿಚಾರಿಸಿದಾಗ, ಈ ಸಂಬಂಧ ಸದರಿ ಆರೋಪಿ ಶ್ರೀ ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರು ತಮಗೆ ಮತ್ತು ತಮ್ಮ ಸಿಬ್ಬಂದಿಯವರಿಗೆ ಸೇರಿ ರೂ. 1,000-00 ಲಂಚದ ಹಣವನ್ನು ಕೊಡುವಂತೆ ಒತ್ತಾಯಿಸಿದ್ದು, ಫಿರ್ಯಾದಿಗೆ ಲಂಚದ ಹಣ ನೀಡಲು ಇಷ್ಟವಿಲ್ಲದ ಕಾರಣ, ಸದರಿ ಆಪಾದಿತರ ವಿರುದ್ಧ ಸೂಕ್ತ ಕಾನೂನು ಕ್ರಮ ತೆಗೆದುಕೊಳ್ಳುವಂತೆ ಕೋರಿ ದೂರು ಅರ್ಜಿ ಸಲ್ಲಿಸಿರುತ್ತಾರೆ.

ಸದರಿ ದೂರನ್ನು ಆಧರಿಸಿ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಮಂಗಳೂರುರವರು ಮೇಲ್ಕಂಡ ಆರೋಪಿತ ವಿರುದ್ಧ ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರ ಪ್ರಕಾರ ಮಂಗಳೂರು ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ : 10/2009 ರಲ್ಲಿ ಪ್ರಕರಣವನ್ನು ದಾಖಲಿಸಿ, ತನಿಖೆಯನ್ನು ಕೈಗೊಂಡಿರುತ್ತಾರೆ.

ನಂತರ ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ದಿನಾಂಕ : 03-11-2009 ರಂದು ಬೀಸಿದ ಬಲೆಯು ಯಶಸ್ವಿಯಾಗಿದ್ದು, ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಹೆಚ್.ಜಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಪುತ್ತೂರು ಇವರು ನೆರಳು ಸಾಕ್ಷಿದಾರರ ಸಮಕ್ಷಮ ಫಿರ್ಯಾದುದಾರರಿಂದ ಲಂಚದ ಹಣ ರೂ. 1,000-00ನ್ನು ಸ್ವೀಕರಿಸಿ, ಮಂಗಳೂರು ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದಿರುತ್ತಾರೆ. ಆರೋಪಿತರ ಬಲಗೈ ಬೆರಳುಗಳನ್ನು ತೊಳೆಸಿದ ದ್ರಾವಣ ಬಣ್ಣ ಬದಲಾಗಿ ಆರೋಪಿತರು ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ. ಲಂಚದ ಹಣವನ್ನು ಆರೋಪಿತರ ಡೈರಿಯ ಮಧ್ಯದಿಂದ ವಶಪಡಿಸಿಕೊಳ್ಳಲಾಗಿದೆ. ನಡೆದ ಘಟನೆಯ ಬಗ್ಗೆ ಫಿರ್ಯಾದಿ ಮತ್ತು ನೆರಳು ಸಾಕ್ಷಿದಾರರು ತಮ್ಮ ಹೇಳಿಕೆಗಳಲ್ಲಿ ದೃಢಪಡಿಸಿರುತ್ತಾರೆ. ಸದರಿ ಆರೋಪಿತರನ್ನು ದಸ್ತಗಿರಿ ಮಾಡಿ, ಘನ ನ್ಯಾಯಾಲಯದ ನ್ಯಾಯಾಧೀಶರ ಮುಂದೆ ಹಾಜರುಪಡಿಸಿರುತ್ತಾರೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಕೃತ್ಯನಡೆದ ಸ್ಥಳದ ನಕ್ಷೆ, ಆರೋಪಿತರ ಸೇವಾ ವಿವರಗಳು, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಹೆಚ್.ಜಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988 ಕಲಂ 19(1)(ಬಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಜಿ.ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿಯನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7 ಮತ್ತು 13(1)(ಡಿ) ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 54 ವಾತೆತ 2009, ಬೆಂಗಳೂರು, ದಿನಾಂಕ: 24.08.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಆರ್. ಚಂದ್ರಶೇಖರಾರಾಧ್ಯ, ಪೀಠಾಧಿಕಾರಿ, ಆರ್ಥಿಕ ಇಲಾಖೆ, ವಾಣಿಜ್ಯ ತೆರಿಗೆ–2 ಶಾಖೆ ಆದ ನಾನು ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಜಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 18ರ ಪ್ರಕಾರ, ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ : 24–08–2010 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2359

**ಎಂ.ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಆಪ್ತ ಶಾಖೆಯಲ್ಲಿನ ಗ್ರೂಪ–ಬಿ ಹುದ್ದೆಯೊಂದನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ** : ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಎಂ/68/2010, ದಿನಾಂಕ : 27–07–2010.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 27–07–2010ರ ಅನಧಿಕೃತ ಟಿಪ್ಪಣಿಯಲ್ಲಿ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರ ಕಛೇರಿಗೆ ಆಪ್ತ ಕಾರ್ಯದರ್ಶಿ ಹುದ್ದೆ ಮಂಜೂರಾಗಿಲ್ಲದ ಕಾರಣ ಮುಖ್ಯಮಂತ್ರಿಯವರ ಸಚಿವಾಲಯಕ್ಕೆ ಮಂಜೂರಾಗಿರುವ ಹುದ್ದೆಯಲ್ಲಿ ಗ್ರೂಪ್–ಬಿ ವೃಂದದ ಹುದ್ದೆಯಲ್ಲಿ ಖಾಲಿಯಿರುವ 1 ಹುದ್ದೆಯನ್ನು ಗ್ರೂಪ್–ಎ ವೃಂದಕ್ಕೆ ಉನ್ನತೀಕರಿಸಿ ಶ್ರೀ ರಾಮಶೆಟ್ಟಿಗಾರ್, ಉಪನಿರ್ದೇಶಕರು, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರನ್ನು ಮಾನ್ಯ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರ ಆಪ್ತ ಕಾರ್ಯದರ್ಶಿಯಾಗಿ ದಿನಾಂಕ : 07–07–2010 ರಿಂದ ಜಾರಿಗೆ ಬರುವಂತೆ ನೇಮಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 369 ಸಅಸೇ 2010 ಬೆಂಗಳೂರು, ದಿನಾಂಕ: 06.09.2010**

ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಖಾಲಿಯಿರುವ ಒಂದು ಗ್ರೂಪ್–ಬಿ ಹುದ್ದೆಯನ್ನು ದಿನಾಂಕ : 7–7–2010 ರಿಂದ ಜಾರಿಗೆ ಬರುವಂತೆ ಗ್ರೂಪ್–ಎ ವೃಂದಕ್ಕೆ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರ ಆಪ್ತ ಕಾರ್ಯದರ್ಶಿಯವರ ಸೇವೆಯು ಅಗತ್ಯವಿರುವವರೆಗೂ ಅಥವಾ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರ ಪದಾವಧಿಯವರೆಗೂ ಅಥವಾ ಮುಂದಿನ ಆದೇಶದವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 1236 ಸೇ–3/2010, ದಿನಾಂಕ : 16–08–2010 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2360

**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–3)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ** : ಪಶು ಆಸ್ಪತ್ರೆ, ದೊಡ್ಡಬಳ್ಳಾಪುರ ಇಲ್ಲಿನ ಕೃತಕ ಗರ್ಭಧಾರಣಾ ಕೇಂದ್ರವನ್ನು ದೊಡ್ಡಬಳ್ಳಾಪುರ ತಾಲ್ಲೂಕಿನ ಮಧುರೆ ಹೋಬಳಿಯ ಕನ್ನಮಂಗಲ ಗ್ರಾಮಕ್ಕೆ ಸ್ಥಳಾಂತರಿಸುವಿಕೆ.

**ಓದಲಾಗಿದೆ** :
1. ಪತ್ರ ಸಂಖ್ಯೆ : ಬೆಂಗ್ರಾಜಿಪಂ : ಸಿ14/ಪ.ಪಾ/ಸಿಆರ್/8/2009–10, ದಿನಾಂಕ : 30–11–2009.
2. ಪತ್ರ ಸಂಖ್ಯೆ : ಆಪಸಂ/ಡಿವಿಡಿ–3/ವಿವ–21/2008–09, ದಿನಾಂಕ : 18–01–2010 ಮತ್ತು ದಿನಾಂಕ : 02–08–2010.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಬೆಂಗಳೂರು ಇವರು ಕನ್ನಮಂಗಲ ಗ್ರಾಮದಲ್ಲಿ ಪಶುಚಿಕಿತ್ಸಾ ಕೇಂದ್ರವನ್ನು ಸ್ಥಾಪಿಸಲು ದಾನಿಗಳು ಈಗಾಗಲೇ ಕಟ್ಟಡವನ್ನು ದಾನವಾಗಿ ನೀಡಿದ್ದು ಸಿಬ್ಬಂದಿ ಸಮೇತ ಕೃತಕ ಗರ್ಭಧಾರಣಾ ಕೇಂದ್ರವನ್ನು ಕನ್ನಮಂಗಲ ಗ್ರಾಮಕ್ಕೆ ವರ್ಗಾಯಿಸುವುದರಿಂದ ಸರ್ಕಾರಕ್ಕೆ ಯಾವುದೇ ಹೆಚ್ಚಿನ ಹೊರೆ ಇಲ್ಲದ ಕಾರಣ ಹಾಗೂ ಕೃಷಿ ಮತ್ತು ಕೈಗಾರಿಕಾ ಸಮಿತಿ ಸಭೆಯಲ್ಲಿ, ಜಿಲ್ಲಾ ಪಂಚಾಯತ್‌ನ ಸರ್ವ ಸದಸ್ಯರ ಸಾಮಾನ್ಯ ಸಭೆಯಲ್ಲಿ ಕೃತಕ ಗರ್ಭಧಾರಣಾ ಕೇಂದ್ರವನ್ನು ಸ್ಥಳಾಂತರಿಸಲು ಅನುಮೋದನೆ ನೀಡಿರುವುದರಿಂದ ಹೆಚ್ಚುವರಿಯಾಗಿರುವ ದೊಡ್ಡಬಳ್ಳಾಪುರದ ಕೃತಕ ಗರ್ಭಧಾರಣಾ ಕೇಂದ್ರವನ್ನು

ಮಧುರೆ ಹೋಬಳಿಯ ಕನ್ನಮಂಗಲ ಗ್ರಾಮಕ್ಕೆ ವರ್ಗಾವಣೆ ಮಾಡಿ ಸುತ್ತಮುತ್ತಲಿನ ಗ್ರಾಮಗಳ ಪಶುವೈದ್ಯ ಸೇವೆಗಳಿಗೆ ಅನುಕೂಲ ಮಾಡಿಕೊಡುವಂತೆ ಕೋರಿರುತ್ತಾರೆ.

2. ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಆಯುಕ್ತರು, ಪಶುಸಂಗೋಪನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಮಾನ್ಯ ಶಾಸಕರು, ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರ ಮತ್ತು ಕೊಳಚೆ ನಿರ್ಮೂಲನಾ ಮಂಡಳಿಯ ಅಧ್ಯಕ್ಷರು ಪಶುಆಸ್ಪತ್ರೆ, ದೊಡ್ಡಬಳ್ಳಾಪುರ ಇಲ್ಲಿನ ಕೃತಕ ಗರ್ಭಧಾರಣಾ ಕೇಂದ್ರವನ್ನು ಕನ್ನಮಂಗಲ ಗ್ರಾಮಕ್ಕೆ ಸ್ಥಳಾಂತರಿಸುವಂತೆ ಕೋರಿರುತ್ತಾರೆಂದು, ಸದರಿ ಕೃತಕ ಗರ್ಭಧಾರಣಾ ಕೇಂದ್ರದ ಸ್ಥಳಾಂತರಕ್ಕೆ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್‌ನ ಕೃಷಿ ಮತ್ತು ಕೈಗಾರಿಕಾ ಸಮಿತಿ ಸಭೆ ಹಾಗೂ ಸರ್ವ ಸದಸ್ಯರ ಸಾಮಾನ್ಯ ಸಭೆಯಲ್ಲಿ ಸರ್ವಾನುಮತದಿಂದ ಅನುಮೋದನೆ ನೀಡಲಾಗಿದೆ ಎಂದು ತಿಳಿಸಿರುತ್ತಾರೆ. 2007ರ ಜಾನುವಾರು ಗಣತಿಯಂತೆ ಕನ್ನಮಂಗಲ ಮತ್ತು ಸುತ್ತಮುತ್ತಲಿನ ಗ್ರಾಮಗಳು ಒಟ್ಟು 5850 ಜಾನುವಾರುಗಳನ್ನು ಹೊಂದಿರುತ್ತದೆಂದು, ರಾಷ್ಟ್ರೀಯ ಕೃಷಿ ಆಯೋಗದ ಶಿಫಾರಸ್ಸು/ಕೇಂದ್ರ ಸರ್ಕಾರದ ನೀತಿಯಂತೆ ಪ್ರತಿ 5000 ಜಾನುವಾರು ಘಟಕಗಳಿಗೆ ಅಥವಾ ಪ್ರತಿ 10–12 ಹಳ್ಳಿಗಳಿಗೆ ಕನಿಷ್ಠ ಒಂದು ಪಶುವೈದ್ಯಕೀಯ ಸಂಸ್ಥೆ ಇರಬೇಕಾಗಿದ್ದು ಈ ಪ್ರಮಾಣದ ಜಾನುವಾರುಗಳನ್ನು ಕನ್ನಮಂಗಲ ಗ್ರಾಮವು ಹೊಂದಿರುತ್ತದೆಂದು ತಿಳಿಸಿರುತ್ತಾರೆ. ಡಾ: ಡಿ.ಎಂ. ನಂಜುಂಡಪ್ಪರವರ ಪ್ರಾದೇಶಿಕ ಅಸಮತೋಲನಾ ವರದಿಯಂತೆ ಕನ್ನಮಂಗಲ ಗ್ರಾಮವು ಅತ್ಯಂತ ಹಿಂದುಳಿದ ಪ್ರದೇಶವಾಗಿದ್ದು, ಕೃತಕ ಗರ್ಭಧಾರಣಾ ಕೇಂದ್ರವನ್ನು ಸ್ಥಳಾಂತರಿಸುವುದರಿಂದ ದೊಡ್ಡಬಳ್ಳಾಪುರ ಪಶುಆಸ್ಪತ್ರೆಯ ದೈನಂದಿನ ಕಾರ್ಯಚಟುವಟಿಕೆಗಳಿಗೆ ಯಾವುದೇ ತೊಂದರೆ ಆಗುವುದಿಲ್ಲವೆಂದು, ಹೆಚ್ಚಿನ ಆರ್ಥಿಕ ಹೊರೆ ಬೀಳುವುದಿಲ್ಲವೆಂದು ಮತ್ತು ಕನ್ನಮಂಗಲ ಗ್ರಾಮದ ಸುತ್ತಮುತ್ತಲಿನ ಗ್ರಾಮಗಳಿಗೆ ಪಶುವೈದ್ಯಕೀಯ ಸೇವೆಯನ್ನು ಒದಗಿಸಲು ಸಾಧ್ಯವಾಗುತ್ತದೆಂದು ತಿಳಿಸಿ, ಮೇಲೆ ತಿಳಿಸಿದ ಕೃತಕ ಗರ್ಭಧಾರಣಾ ಕೇಂದ್ರವನ್ನು ಹುದ್ದೆ ಸಮೇತ ದೊಡ್ಡಬಳ್ಳಾಪುರ ಮಧುರೆ ಹೋಬಳಿಯ ಕನ್ನಮಂಗಲ ಗ್ರಾಮಕ್ಕೆ ಸ್ಥಳಾಂತರಿಸಿ ಕನ್ನಮಂಗಲ ಗ್ರಾಮದಲ್ಲಿ ಹೊಸದಾಗಿ ಕೃತಕ ಗರ್ಭಧಾರಣಾ ಕೇಂದ್ರವನ್ನು ತೆರೆಯಲು ಸೂಕ್ತ ಆದೇಶ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

3. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು, ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ ಪಶು ಆಸ್ಪತ್ರೆ ವ್ಯಾಪ್ತಿಯಲ್ಲಿ ಪ್ರಸ್ತುತ ಒಂದು ಆಸ್ಪತ್ರೆ ಮತ್ತು ಕೃತಕ ಗರ್ಭಧಾರಣಾ ಕೇಂದ್ರ ಸೇರಿದಂತೆ ಒಟ್ಟು ಎರಡು ಪಶುವೈದ್ಯಕೀಯ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದೆ. ಸದರಿ ಕೃತಕ ಗರ್ಭಧಾರಣಾ ಕೇಂದ್ರವನ್ನು ಅದೇ ತಾಲ್ಲೂಕಿನ ಮಧುರೆ ಹೋಬಳಿಯ ಕನ್ನಮಂಗಲ ಗ್ರಾಮಕ್ಕೆ ಸ್ಥಳಾಂತರಿಸಲು ಜಿಲ್ಲಾ ಪಂಚಾಯತಿ ಕೃಷಿ ಮತ್ತು ಕೈಗಾರಿಕಾ ಸಮಿತಿ ಮತ್ತು ಸರ್ವ ಸದಸ್ಯರ ಸಾಮಾನ್ಯ ಸಭೆಯಲ್ಲಿ ಅನುಮೋದನೆ ನೀಡಲಾಗಿದೆ. ರಾಷ್ಟ್ರೀಯ ಕೃಷಿ ಆಯೋಗದ ಶಿಫಾರಸ್ಸು, Standard Pattern-Norms ಮತ್ತು ಕೇಂದ್ರ ಸರ್ಕಾರದ ಮಾರ್ಗಸೂಚಿ ಅನುಸಾರ ಪ್ರತಿ 5000 ಜಾನುವಾರು ಘಟಕಗಳಿಗೆ ಒಂದು ಪಶುವೈದ್ಯಕೀಯ ಸಂಸ್ಥೆ ಇರಬೇಕಾಗಿದ್ದು ಕನ್ನಮಂಗಲ ಮತ್ತು ಸುತ್ತಮುತ್ತಲಿನ ಗ್ರಾಮಗಳು 5850 ಜಾನುವಾರುಗಳನ್ನು ಹೊಂದಿದ್ದು ನಿಗದಿತ ಪ್ರಮಾಣದ ಜಾನುವಾರು ಹೊಂದಿರುತ್ತದೆ. ಡಾ: ಡಿ.ಎಂ. ನಂಜುಂಡಪ್ಪರವರ ಪ್ರಾದೇಶಿಕ ಅಸಮತೋಲನಾ ವರದಿಯನ್ವಯ ಕನ್ನಮಂಗಲ ಗ್ರಾಮವು ಅತ್ಯಂತ ಹಿಂದುಳಿದ ಪ್ರದೇಶವಾಗಿದ್ದು, ಪಶು ಆಸ್ಪತ್ರೆ, ದೊಡ್ಡಬಳ್ಳಾಪುರದಲ್ಲಿ ಒಂದು ಆಸ್ಪತ್ರೆ ಮತ್ತು ಕೃತಕ ಗರ್ಭಧಾರಣಾ ಕೇಂದ್ರ ಸೇರಿದಂತೆ ಒಟ್ಟು ಎರಡು ಪಶುವೈದ್ಯಕೀಯ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದು ಅಲ್ಲಿನ ಕೃತಕ ಗರ್ಭಧಾರಣಾ ಕೇಂದ್ರವನ್ನು ಕನ್ನಮಂಗಲ ಗ್ರಾಮಕ್ಕೆ ಸ್ಥಳಾಂತರಿಸುವುದರಿಂದ ಸುತ್ತಮುತ್ತಲಿನ ಎಂಟು ಗ್ರಾಮಗಳಿಗೆ ಪಶುವೈದ್ಯಕೀಯ ಸೇವೆಗಳನ್ನು ಒದಗಿಸಬಹುದಾಗಿದೆ. ಕನ್ನಮಂಗಲ ಗ್ರಾಮವು ಸುತ್ತಲಿನ ಎಂಟು ಗ್ರಾಮಗಳಿಗೆ ಕೇಂದ್ರ ಸ್ಥಾನದಲ್ಲಿದ್ದು, ಅಲ್ಲಿ ಪಶುಚಿಕಿತ್ಸಾ ಕೇಂದ್ರ ಆರಂಭಿಸುವ ಸಲುವಾಗಿ ಚಿನ್ಮಯ ಸಂಘವು ಕಟ್ಟಡ ದಾನ ನೀಡಲು ಒಪ್ಪಿರುವುದರಿಂದ ಮತ್ತು ಕೃತಕ ಗರ್ಭಧಾರಣಾ ಕೇಂದ್ರಕ್ಕೆ ಈಗಾಗಲೇ ಅನುದಾನ ನಿಗದಿಪಡಿಸಿದ್ದು, ಸದರಿ ಕೇಂದ್ರವನ್ನು ಕನ್ನಮಂಗಲ ಗ್ರಾಮಕ್ಕೆ ಸ್ಥಳಾಂತರಿಸಿದಲ್ಲಿ ನಿಗದಿಪಡಿಸಿದ ಅನುದಾನವನ್ನೇ ಕನ್ನಮಂಗಲ ಗ್ರಾಮದಲ್ಲಿ ಕೃತಕ ಗರ್ಭಧಾರಣಾ ಕೇಂದ್ರ ಪ್ರಾರಂಭಿಸುವಲ್ಲಿ ವಿನಿಯೋಗಿಸಬಹುದಾದ್ದರಿಂದ ಹೆಚ್ಚಿನ ಅನುದಾನದ ಅವಶ್ಯಕತೆ ಇರುವುದಿಲ್ಲವಾದ್ದರಿಂದ ಸರ್ಕಾರಕ್ಕೆ ಆರ್ಥಿಕವಾಗಿ ಯಾವುದೇ ರೀತಿಯ ಹೊರೆ ಬೀಳುವುದಿಲ್ಲ. ದೊಡ್ಡಬಳ್ಳಾಪುರದ ಕೃತದ ಗರ್ಭಧಾರಣಾ ಕೇಂದ್ರದ ಸಿಬ್ಬಂದಿಯನ್ನೇ ಕನ್ನಮಂಗಲಕ್ಕೆ ವರ್ಗಾವಣೆ ಮಾಡುವುದರಿಂದ ಸಿಬ್ಬಂದಿ ಕೊರತೆ ಸಹ ಉಂಟಾಗುವುದಿಲ್ಲ. ದೊಡ್ಡಬಳ್ಳಾಪುರದಲ್ಲಿ ಈಗಿರುವ ಪಶು ಆಸ್ಪತ್ರೆಯ ಮೂಲಕವೇ ತಾಲ್ಲೂಕಿಗೆ ಪಶುವೈದ್ಯಕೀಯ ಸೇವೆಗಳನ್ನು ಒದಗಿಸಬಹುದಾದ್ದರಿಂದ, ಕೃತಕ ಗರ್ಭಧಾರಣಾ ಕೇಂದ್ರವನ್ನು ಕನ್ನಮಂಗಲ ಗ್ರಾಮಕ್ಕೆ ಸ್ಥಳಾಂತರಿಸಿದಲ್ಲಿ ಸಾರ್ವಜನಿಕರಿಗೆ ಮತ್ತು ಕಛೇರಿಯ ದೈನಂದಿನ ಕಾರ್ಯಚಟುವಟಿಕೆಗಳಿಗೆ ಯಾವುದೇ ರೀತಿಯ ತೊಂದರೆಯಾಗುವುದಿಲ್ಲ. ಕೃತಕ ಗರ್ಭಧಾರಣಾ ಕೇಂದ್ರವನ್ನು ಕನ್ನಮಂಗಲಕ್ಕೆ ಸ್ಥಳಾಂತರಿಸಲು ಸ್ಥಳೀಯ ಶಾಸಕರು ಒಪ್ಪಿರುತ್ತಾರೆ.

4. ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಜಾನುವಾರು ಚಿಕಿತ್ಸೆ, ರೈತಾಪಿ ವರ್ಗದ ಹಿತದೃಷ್ಟಿಯಿಂದ ಮತ್ತು ಕನ್ನಮಂಗಲದ ಸುತ್ತಮುತ್ತಲಿನ ಗ್ರಾಮಗಳಿಗೆ ಪಶುವೈದ್ಯ ಸೇವೆಗಳನ್ನು ವಿಸ್ತರಿಸಲು ಇಲಾಖಾ ಆಯುಕ್ತರ ಶಿಫಾರಸ್ಸಿನಂತೆ ದೊಡ್ಡಬಳ್ಳಾಪುರ ಪಶುಆಸ್ಪತ್ರೆಯ ಕೃತಕ ಗರ್ಭಧಾರಣಾ ಕೇಂದ್ರವನ್ನು ಸಿಬ್ಬಂದಿ ಸಮೇತ ಕನ್ನಮಂಗಲ ಗ್ರಾಮಕ್ಕೆ ಸ್ಥಳಾಂತರಿಸುವುದು ಸೂಕ್ತ ಎಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಪಸಂಮೀ 216 ಪಅವಿ 2009 ಬೆಂಗಳೂರು, ದಿನಾಂಕ: 25.08.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪಶುಆಸ್ಪತ್ರೆ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿನ ಕೃತಕ ಗರ್ಭಧಾರಣಾ ಕೇಂದ್ರವನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಪಶುವೈದ್ಯಕೀಯ ಪರೀಕ್ಷಕ – 1 ಹುದ್ದೆ ಮತ್ತು ಗ್ರೂಪ್ "ಡಿ" ನೌಕರ – 1 ಹುದ್ದೆ ಸಮೇತ ಅದೇ ತಾಲ್ಲೂಕಿನ ಮಧುರೆ ಹೋಬಳಿಯ ಕನ್ನಮಂಗಲ ಗ್ರಾಮಕ್ಕೆ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಪಿ.ನಾಗರಾಜ**

ಪೀಠಾಧಿಕಾರಿ–2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

ಪಿ.ಆರ್. ನಂ. 2361

## FOREST, ECOLOGY AND ENVIRONMENT SECRETARIAT

**Sub: -** Diversion of 4.30 ha. of forest land for construction of Savalagi-Tungal lift irrigation in Jamakandi, Bagalkote in favour of the executive engineer, Karnataka Neeravari Nigama Limited, HBC Division, Athani.

**Read: -**
1. Letter No. A5 (7) GFL. CR.11/08-09, dated 27-05-2008 of the principal chief conservator of Forests, Bangalore.
2. State Government letter No. FEE 102 FLL 2008, dated 23-07-2008
3. Letter No. 4-KRB522/2008-BAN/2978, dated 15-09-2008 of Government of India, Ministry of Environment and Forests, Regional Office, Southern Zone, Bangalore.
4. Letter No. A5(3)GFL.CR.11/08-09, dated 07-06-2010 of Principal Chief Conservator of Forests, Bangalore.
5. State Government letter No. FEE 102 FLL 2008, dated 18-08-2010
6. Letter No. 4-KRB 522/2008-BAN/7860, dated 08-09-2010 of Government of India, Ministry of Environment and Forests, Regional Office, Southern Zone, Bangalore.

***

**Preamble:**

The Principal Chief Conservator of Forests, Bangalore vide his letter dated 27-05-2008 read at above has submitted the proposal to obtain the approval under Section 2 of the Forest (Conservation) Act, 1980 for diversion of 4.30 ha. of forest land in Sy. No. 81 of Tungal village, Sy. No. 3, 24 and 25 of Kannolli village of Bagalkote Division for construction of Savalagi-Tungal Lift Irrigation Scheme 4th Stage of Halyal Lift Irrigation Scheme under the Hipparigi Barrage Project, Jamakhandi, Bagalkote Division in favour of the Executive Engineer, Karnataka Neeravari Nigama Limited, HBC Division, Athani.

Accordingly the proposal was recommended to Government of India vide State Government letter dated 23-07-2008 read at (2) above.

The Government of India, Ministry of Environment and Forests, Regional office, Bangalore vide their letter dated 15-09-2008 read at (3) above has given its approval in Principle (Stage-I) for diversion of 4.30 ha. of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 07-06-2010 furnished the compliance report read at (4) above and the same has been sent to Government of India vide State Government letter dated 18-08-2010 read at (5) above.

Government of India, Ministry of Environment and Forests, Regional Office, South Zone, Bangalore vide their letter dated 08-09-2010 read at (6) above has conveyed its approval (Stage-II) under Section 2 of the Forest (Conservation) Act, 1980 for diversion of 4.30 ha. of forest land subject to certain conditions.

The proposal has been examined in detail and hence the Order

**Government Order No. FEE 102 FLL 2008, Bangalore, dated 19-10-2010**

In the circumstances explained in the preamble above, Government are pleased to accord sanction under section (2) of Forest (Conservation) Act 1980 for diversion of 4.30 ha. of forest land in Sy. No. 81 of Tungal Village and Sy. No. 3,24 and 25 of Kannolli village of Bagalkote Division for construction of Savalagi-Tungal Lift Irrigation Scheme 4th Stage of Halyal Lift Irrigation Scheme under the Hippargi Barrage Project, Jamakhandi, Bagalkote Division in favour of the Executive Engineer, Karnataka Neeravari Nigama Limited, HBC Division, Athani subject of the following conditions:

1. The legal status of forest land shall remain unchanged
2. Compensatory afforestation shall be raised over 4.30 ha. Identified non-forest land in Sy. No. 13 of Hamagandi village of Jamakhandi taluks at the cost of user agency. The State Government shall obtain prior permission of Central Government for change of location and schedule of compensatory afforestation, if any.
3. Non forest land for compensatory afforestation shall be notified by the State Government as P.F/R.F. and Nodal Officer (FCA) shall report the compliance within 6 months.
4. The additional amount of the Net Present Value (NPV) of the diverted forest land if any, becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to Ad-hoc CAMPA in account number CA-1582 of Corporation Bank, Block-II, CGO Complex, Phase-I, Lodhi Road, New Delhi-110 003.
5. The Catchment Area Treatment Plan shall be executed at the cost of user agency as per the plan under supervision of State Forest Department.
6. The total forest area utilized for the project shall not exceed 4.30 hectares. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department under Section 82 of the Karnataka Forest act 1963.

7. The lessee has to pay the lease rent as fixed by the State Government vide Government Order No. FEE 69 FFM 96, dated 29-08-1997 and 01-12-1997 and subsequent Government Orders in this regard.
8. The lease period is for twenty (20) years.
9. Leased out area should be used for the purpose for which it is granted.
10. The user agency shall deposit funds for raising compensatory afforestation at the rate prevailing at the time of sanction (at present it is Rs. 94,000/-per ha.)
11. The Karnataka Forest Act, 1963 and Karnataka Forest Rules, 1969 will be applicable for any violation.
12. The user agency while executing the agreement has to register the Deed with the concerned jurisdictional Sub-Registrar duly paying as per the prevailing rate of Stamp Duty and Registration fee.
13. The user agency has to pay the net present value of the forest land diverted under this proposal in accordance with the Government of Karnataka notification, dated 17-01-2004.
14. Any other conditions to be imposed by the Government of India/Government of Karnataka/Principal Chief Conservator of forests will be abided by the lessee.

By Order and in the name of the Governor of Karnataka

(**H. M. Mallikarjuna Swamy)**

Under Secretary to Government,

P.R. No. 2670

Forest, Ecology and Environment Department

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸ್ಯೋದ್ಯಮ ಸಚಿವಾಲಯ

**ವಿಷಯ** : ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ ಇಲ್ಲಿ ಭವ್ಯವಾದ ಕಲಾತ್ಮಕವಾದ ವಸ್ತು ಸಂಗ್ರಹಾಲಯವನ್ನು ನಿರ್ಮಿಸುವ ಬಗ್ಗೆ.

**ಓದಲಾಗಿದೆ** : 1. ಆಡಳಿತಾಧಿಕಾರಿಗಳು ಶ್ರಿ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ ಇವರ ಪತ್ರ ದಿನಾಂಕ 08–05–2010.

**2.** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರ ಸಂಖ್ಯೆ : ಡಿಎಎಂಇಎಸ್‌ಟಿ.3 ಧನಸಹಾಯ 2010–11, ದಿನಾಂಕ 18–6–2010.

**3.** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ ಕಸನಿ/ವಸ್ತುಸಂಗ್ರ/17/2010–11, ದಿನಾಂಕ 01–10–2010.

**ಪ್ರಸ್ತಾವನೆ :**

ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ ಇದರ ಆಡಳಿತಾಧಿಕಾರಿಗಳು, ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಗದಗ ಜಿಲ್ಲಾ ಉಸ್ತವಾರಿ ಸಚಿವರಿಗೆ ಮನವಿ ಸಲ್ಲಿಸಿ, ಸದರಿ ಮನವಿಯಲ್ಲಿ ಗದಗ ನಗರ ಮದ್ಯವರ್ತಿ ಪಟ್ಟಣವಾಗಿರುತ್ತದೆ. ಇದು ಧರ್ಮ, ವ್ಯಾಪಾರ, ವಾಣಿಜ್ಯ, ಶಿಕ್ಷಣ, ಕಲೆ, ಸಂಸ್ಕೃತಿ , ಸಾಹಿತ್ಯ ಪುರಾತನ ಶಿಲ್ಪ ಕಲೆ ಹಾಗೂ ಸಂಗೀತಕ್ಕೆ ಹೆಸರುವಾಸಿಯಾಗಿರುವ ನಗರವಾಗಿದೆ ಎಂದು ತಿಳಿಸಿ, ನಗರದ ಹೃದಯ ಭಾಗದಲ್ಲಿ ಎಡಿಯೂರು ಶ್ರೀ ತೋಂಟದ ಸಿದ್ಧಲಿಂಗೇಶ್ವರರಿಂದ ಸ್ಥಾಪಿಸಲ್ಪಟ್ಟ ಐತಿಹಾಸಿಕವಾದ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಇರುತ್ತದೆ. ಈ ಮಠದ ಕರ್ತೃ ಗದ್ದುಗೆ ಬಹಳ ಪ್ರಭಾವಶಾಲಿಯಾಗಿದ್ದು, ಆ ಗದ್ದುಗೆಯಿಂದ ಗದಗು ಎಂಬ ಹೆಸರು ಈ ಊರಿಗೆ ಬಂದಿರುತ್ತದೆ. ಎಂದು ಈ ಮಠಕ್ಕೆ ಸುದೀರ್ಘವಾದ ಇತಿಹಾಸ ಮತ್ತು ಶ್ರೇಷ್ಠ ಪರಂಪರೆ ಇದೆಯೆಂದು ತಿಳಿಸಿರುತ್ತಾರೆ. ಈ ಮಠ ಮುಂಬೈ ಸಾರ್ವಜನಿಕ ಟ್ರಸ್ಟ್ ಕಾಯ್ದೆ 1950ನೇ ಪ್ರಕಾರ ಪಬ್ಲಿಕ್ ಚಾರಿಟೆಬಲ್ ಟ್ರಸ್ಟ್ ಎಂದು ನೋಂದಣಿಯಾಗಿರುತ್ತದೆ. ಈ ಮಠಕ್ಕೆ ಕೆಳದಿ, ಕಿತ್ತೂರು, ಹರಪನಹಳ್ಳಿ, ಇಕ್ಕೇರಿ ಮುಂತಾದ ರಾಜರು ಹಾಗೂ ಅನೇಕ ದೇಶಗತಿ ಮನೆತನದವರು ದಾನ ದತ್ತಿ ನೀಡಿರುತ್ತಾರೆ. ಕೆಳದಿ ಅರಸರು ಕೊಟ್ಟ ಅತ್ಯಮೂಲ್ಯವಾದ ಬಂಗಾರದ ಪಾದುಕೆ, ಬೆಳ್ಳಿ ಸಿಂಹಾಸನ, ಅಂಬಾರಿ, ಬಂಗಾರದ ಕಿರೀಟ, ಬಂಗಾರದ ರಾಜಗೊಂಡೆಗಳು ಬಂಗಾರದ ಪಂಚಕಳಸಗಳು, ಕೆಳದಿ ರಾಣಿಯವರು ತಮ್ಮ ಕೈಯಿಂದ ನೇಯ್ದ ರತ್ನಕಂಬಳಿಗಳು ಇತ್ಯಾದಿ ಇಂದಿಗೂ ಶ್ರೀ ಮಠದಲ್ಲಿ ಇರುತ್ತವೆ. ಪ್ರಾಚೀನ ಕಾಲದ ತಾಳೆಗರಿಗಳು ಮತ್ತು ಕಾಗದಗಳು ರಾಜ ಮಹಾರಾಜರಿಂದ ಹಾಗೂ ಅರಸರಿಂದ ಬಂದ ದಾಖಲಾತಿಗಳೂ 12ನೇ ಹಾಗೂ 15ನೇ ಶತಮಾನದ ಶರಣರ ವಚನಗಳ ಕಟ್ಟುಗಳು ಹೇರಳವಾಗಿರುತ್ತವೆ. ಆ ಕಾಲದ ಇತಿಹಾಸ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದ ಅನೇಕ ಪರಿಕರಗಳು ಶ್ರೀ ಮಠದಲ್ಲಿ ಇವೆಯೆಂದು ತಿಳಿಸಿರುತ್ತಾರೆ. ಇನ್ನು ಬಹಳಷ್ಟು ಸಂಗ್ರಹ ಮಾಡುವುದು ಅವಶ್ಯಕ ಇರುತ್ತದೆ. ಈ ಹಿನ್ನಲೆಯಲ್ಲಿ ಗದಗ ಶ್ರೀಮಠದ ಆಸ್ತಿ ಸಿ.ಟಿ.ಎಸ್. ನಂ. 3787/48ಎ/5ಸಿ/2ಎ1 ರಲ್ಲಿ ಒಂದು ಭವ್ಯವಾದ ಕಲಾತ್ಮಕವಾದ ವಸ್ತು ಸಂಗ್ರಹಾಲಯವನ್ನು ನಿರ್ಮಿಸಲು ಉದ್ದೇಶಿಸಲಾಗಿದೆಯೆಂದು ಇದಕ್ಕೆ ಅಂದಾಜು ವೆಚ್ಚ ರೂ. 1.65 ಕೋಟಿ ತಗಲುವುದೆಂದು, ಕಟ್ಟಡದ ನೀಲಿನಕ್ಷೆ ಅಂದಾಜು ಪತ್ರಿಕೆ, ಪೋಟೋ, ಆಸ್ತಿ ಉತಾರ, ಟ್ರಸ್ಟ್ ನೋಂದಣಿ ದಾಖಲಾತಿ ಲಗತ್ತಿಸಿ ಕಳುಹಿಸಿರುತ್ತಾರೆ.

ಈ ಪ್ರಸ್ತಾವನೆಗೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವರದಿಯನ್ನು ಕೋರಲಾಗಿದ್ದು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಗೆ ಯೋಜನೆ ಹಾಗೂ ಯೋಜನೇತರ ಬಾಬ್ತಿನಲ್ಲಿ ಸೀಮಿತ ಅನುದಾನದ ಲಭ್ಯವಿದ್ದು ಅದಕ್ಕೆ ಕ್ರಿಯಾಯೋಜನೆಗೆ ಅನುಮೋದನೆ ಪಡೆದು ಕಾರ್ಯೋನ್ಮುಖವಾಗಿರುವುದಿರಂದ ಹಣ ಲಭ್ಯವಿರುವುದಿಲ್ಲವೆಂದು, ಸದರಿ ಯೋಜನೆಗೆ ಆರ್ಥಿಕ ಇಲಾಖೆಯ ಮುಖಾಂತರ ವಿಶೇಷ ಅನುದಾನವನ್ನು (ಕನ್ನಡ ಮತ್ತು ಸಂಸ್ಕೃತಿ ಪ್ರೋತ್ಸಾಹ) ಲೆಕ್ಕಶೀರ್ಷಿಕೆ 2205–00–102–4–31–059 ಅಡಿಯಲ್ಲಿ ಪಡೆದು ಬಿಡುಗಡೆ ಮಾಡಬಹುದಾಗಿರುತ್ತದೆಯೆಂದು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ದಿನಾಂಕ 18–06–2010ರ ಓದಲಾದ (2)ರ ಪತ್ರದಲ್ಲಿ ವರದಿ ಸಲ್ಲಿಸಿರುತ್ತಾರೆ.

ಶ್ರೀ ಜಗದ್ಗುರು ತೊಂಟದಾರ್ಯ ಸಂಸ್ಥಾನಮಠ, ಗದಗ ಇಲ್ಲಿ ಭವ್ಯವಾದ ಕಲಾತ್ಮಕವಾದ ವಸ್ತುಸಂಗ್ರಹಾಲಯವನ್ನು ನಿರ್ಮಿಸಲು ರೂ. 1.00 ಕೋಟಿ ಹಣವನ್ನು 2010–11ನೇ ಸಾಲಿನ ಕ್ರಿಯಾಯೋಜನೆ 2205–00–102–4–31–059 (ಯೋಜನೆ) ಲೆಕ್ಕ ಶೀರ್ಷಿಕೆಯಿಂದ ಬಿಡುಗಡೆ ಮಾಡಬಹುದಾಗಿದೆ ಎಂದು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ ಅದರಂತೆ ಈ ಕೆಳಕಂಡ ಆದೇಶ

**ಆದೇಶ ಸಂಖ್ಯೆ: ಕಸಂವಾಪ್ರ 100 ಕೆಎಂಯು 2010, ಬೆಂಗಳೂರು, ದಿನಾಂಕ 25–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ ಇಲ್ಲಿ ಭವ್ಯವಾದ ಕಲಾತ್ಮಕವಾದ ವಸ್ತುಸಂಗ್ರಹಾಲಯವನ್ನು ನಿರ್ಮಿಸಲು ಸರ್ಕಾರದ ಸಹಾಯಾನುದಾನವಾಗಿ ರೂ. 100.00 ಲಕ್ಷ (ರೂ. ಒಂದು ನೂರು ಲಕ್ಷಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ, ಗದಗ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರಿಗೆ ಸರ್ಕಾರವು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–4–31–059 (ಕನ್ನಡ ಮತ್ತು ಸಂಸ್ಕೃತಿಗೆ ಪ್ರೋತ್ಸಾಹ) ಇದರಡಿಯಲ್ಲಿ ಭರಿಸತಕ್ಕದ್ದು.

**ಷರತ್ತುಗಳು :**

1) ಕಾಮಗಾರಿಯನ್ನು ಟೆಂಡರ್ ಕರೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000 ರಂತೆ ಕ್ರಮ ಕೈಗೊಳ್ಳತಕ್ಕದ್ದು.
2) ಕಾಮಗಾರಿಯನ್ನು ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ ಇವರ ಮೇಲುಸ್ತುವಾರಿಯಲ್ಲಿ ಕೈಗೊಳ್ಳುವುದು.
3) ಇದು ಒಂದು ಬಾರಿಯ ಅನುದಾನವಾಗಿದ್ದು, ಮತ್ತೊಮ್ಮೆ ಸರ್ಕಾರಕ್ಕೆ ಅನುದಾನ ಕೋರಿ ಪ್ರಸ್ತಾವನೆ ಕಳುಹಿಸುವಂತಿಲ್ಲ
4) ಕಾಮಗಾರಿಗೆ ಅನುದಾನ ಉಪಯೋಗಿಸಿದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸುವುದು
5) ಬಿಡುಗಡೆಯಾಗಿರುವ ಅನುದಾನದ ಬಗ್ಗೆ ತ್ವರಿತವಾಗಿ ಖಜಾನೆ ಗಣಕ ಜಾಲದಲ್ಲಿ ಎನ್.ಎಂ.ಸಿ. ಮಾಡುವುದು
6) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 538 ವೆಚ್ಚ–7/2010 ದಿನಾಂಕ 25–08–2010ರಲ್ಲಿ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. ನಂ. 2671

## ಶಿಕ್ಷಣ ಸಚಿವಾಲಯ

**ವಿಷಯ** : ಸಾಕ್ಷರ ಭಾರತ 2012 ಕಾರ್ಯಕ್ರಮ ಅನುಷ್ಠಾನ ಕುರಿತು

**ಓದಲಾಗಿದೆ** :
1. ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆ, ನವದೆಹಲಿ ಅವರ ಪತ್ರ ಸಂಖ್ಯೆ : ಎಫ್ 18–01/2009 ಎನ್.ಎಲ್.ಎಂ.–2009, ದಿನಾಂಕ 24–12–2009.
2. ಸರ್ಕಾರದ ಆದೇಶ ಸಂಖ್ಯೆ : ಇಡಿ 378 ಎಂಸಿಡಿ 2009, ದಿನಾಂಕ 12–03–2010
3. ನಿರ್ದೇಶಕರು, ಲೋಕ ಶಿಕ್ಷಣ ಅವರ ಪತ್ರ ಸಂಖ್ಯೆ : ಡಿಎಂಇ:ಸಾ.ಭಾ–43/2009–10, ದಿನಾಂಕ 18–03–2010.

**ಪ್ರಸ್ತಾವನೆ :**

ಸಾಕ್ಷರ ಭಾರತ ಕಾರ್ಯಕ್ರಮವು ಕೇಂದ್ರ ಸರ್ಕಾರದ 18 ಪ್ರಧಾನ ಕಾರ್ಯಕ್ರಮಗಳಲ್ಲಿ ಒಂದಾಗಿದ್ದು ರಾಷ್ಟ್ರದ 17 ರಾಜ್ಯಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದು. ಅದರಲ್ಲಿ ಕರ್ನಾಟಕ ರಾಜ್ಯವು ಒಂದಾಗಿದೆ. ಈ ಯೋಜನೆಯನ್ನು ರಾಜ್ಯ ಸರ್ಕಾರದ ಸಹಭಾಗಿತ್ವದಲ್ಲಿ ಅನುಷ್ಠಾನಗೊಳಿಸಬೇಕಾಗಿದೆ.

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯದಲ್ಲಿ ಮಹಿಳಾ ಸಾಕ್ಷರತೆ ಪ್ರಮಾಣ ಶೇ 50 ಕ್ಕಿಂತ ಕಡಿಮೆ ಇರುವ 16 ಜಿಲ್ಲೆಗಳಲ್ಲಿ ಅಂದರೆ ಬೆಂಗಳೂರು (ಗ್ರಾಮಾಂತರ) ಬೆಳಗಾವಿ, ಹಾವೇರಿ, ಬಳ್ಳಾರಿ, ಚಿತ್ರದುರ್ಗ, ಬಾಗಲಕೋಟೆ ತುಮಕೂರು, ರಾಯಚೂರು, ಕೊಪ್ಪಳ, ಬೀದರ್, ಚಾಮರಾಜನಗರ, ಮೈಸೂರು, ಗದಗ, ಹಾಸನ, ಕೋಲಾರ, ಬಿಜಾಪುರ ಈ ಜಿಲ್ಲೆಗಳ 107 ತಾಲ್ಲೂಕುಗಳಲ್ಲಿನ 3451 ಗ್ರಾಮ ಪಂಚಾಯತಿಗಳ ವ್ಯಾಪ್ತಿಯಲ್ಲಿ 15 ವಯೋಮಿತಿ 36 ಲಕ್ಷ ಅನಕ್ಷರಸ್ಥರನ್ನು ಸಾಕ್ಷರಸ್ಥನ್ನಾಗಿಸುವ ಸಾಕ್ಷರ ಭಾರತ್ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಾಗೂ ಇವುಗಳ ಜೊತೆಗೆ ವಿಭಜಿತ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳನ್ನು ಸೇರಿದಂತೆ ಒಟ್ಟು 18 ಜಿಲ್ಲೆಗಳಲ್ಲಿ ಸಾಕ್ಷರ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರವು ಮಂಜೂರಾತಿ ನೀಡಿದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಾದ ಸಾಕ್ಷರ ಭಾರತ ಕಾರ್ಯಕ್ರಮವನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಲುವಾಗಿ ವಿವಿಧ ಹಂತಗಳಲ್ಲಿ ಸಮಿತಿಗಳನ್ನು ರಚಿಸಿ ಅವುಗಳಿಗೆ ನಿರ್ದಿಷ್ಠ ಜವಾಬ್ದಾರಿಗಳನ್ನು ವಹಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕೇಂದ್ರ ಸರ್ಕಾರ ಸಾಕ್ಷರ ಭಾರತ್–2012ರ ಕಾರ್ಯಕ್ರಮಕ್ಕೆ ನೀಡಿರುವ ಆಡಳಿತಾತ್ಮಕ ಅನುಮೋದನೆಯ ಅನ್ವಯ ಕೇಂದ್ರ ಸರ್ಕಾರದ ಪಾಲು ಪ್ರಥಮ ಕಂತು ರೂ. 18,44,41,275/–ಗಳ ಅನುದಾನ ಬಿಡುಗಡೆ ಮಾಡಿರುತ್ತಾರೆ. ಸದರಿ ಅನುದಾನ ರಾಜ್ಯ

ಸಾಕ್ಷರತಾ ಮಿಷನ್ ಪ್ರಾಧಿಕಾರದ ವತಿಯಿಂದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಲ್ಲೇಶ್ವರಂ ಶಾಖೆಯಲ್ಲಿ ತೆರೆಯಲಾಗಿರುವ ಮೂಲ ಜಮಾ ಖಾತೆ ನಂ. 31000896425ಗೆ ದಿನಾಂಕ 02–03–2010ರಲ್ಲಿ ರೂ 18,44,41,275 ಗಳು ಜಮಾ ಆಗಿರುತ್ತದೆ ಎಂದು ತಿಳಿಸಲಾಗಿದೆ. ಕೇಂದ್ರ ಸರ್ಕಾರ ಶೇ. 75% ಮತ್ತು ರಾಜ್ಯ ಸರ್ಕಾರ ಶೇ. 25%ರ ಅನುದಾನ ಭರಿಸುವುದಾಗಿದ್ದು ಮೊದಲನೇ ಕಂತಿನ ರಾಜ್ಯ ಸರ್ಕಾರದ ಪಾಲು ರೂ. 6,14,80,425/–ಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಿ ನಿರ್ದೇಶಕರು ಲೋಕ ಶಿಕ್ಷಣ ಅವರು ಕೋರಿರುತ್ತಾರೆ.

ಮೇಲೆ ವಿವರಿಸಿರುವ ವಿಷಯಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 378 ಎಂಸಿಡಿ 2009 (ಭಾಗ) ಬೆಂಗಳೂರು, ದಿನಾಂಕ 23–10–2010**

**ಇಡಿ: 123 ಸ್ಕೀಮರ (ಯುನಿಕ್) 2010, ದಿನಾಂಕ 23–10–2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸಾಕ್ಷರ ಭಾರತ್ 2012 ಕಾರ್ಯಕ್ರಮವನ್ನು 2010–11ನೇ ಸಾಲಿನಿಂದ ಯಶಸ್ವಿಯಾಗಿ ಅನುಷ್ಠಾನಗೊಳಿಸಲು ನಿರ್ದೇಶಕರು, ಲೋಕ ಶಿಕ್ಷಣ ಇಲಾಖೆ, ಇವರಿಗೆ ಅನುಮತಿ ನೀಡಿದೆ.

ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ರಾಜ್ಯದ ಪಾಲಿನ ಅನುದಾನವನ್ನು ಲೆಕ್ಕ ಶೀರ್ಷಿಕೆ 2202–04–001–0–05 (ಯೋಜನೆ)ರಡಿ ಒದಗಿಸಿರುವ ರೂ. 6.15 ಕೋಟಿಗಳ ಅನುದಾನದಲ್ಲಿ ಭರಿಸಲು ಅನುಮತಿಸಿದೆ ಹಾಗೂ ಸಂಬಂಧ ಮೊದಲೆರಡು ಕಂತುಗಳ ಒಟ್ಟಾರೆ ಅನುದಾನ (ಹಿಂದಿನ ಬಿಡುಗಡೆಯೂ ಸೇರಿ) ರೂ. 3.75 ಕೋಟಿಗಳನ್ನು ಬಿಡುಗಡೆ ಮಾಡಿದೆ.

ಖರೀದಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಎಲ್ಲಾ ಪಾರದರ್ಶಕ ನಿಯಮಗಳನ್ನು ಚಾಚೂ ತಪ್ಪದೇ ಪಾಲಿಸುವುದು

ಕಾರ್ಯಕ್ರಮ ತ್ವರಿತ ಮತ್ತು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಅಗತ್ಯ ನಿರ್ಣಯಗಳನ್ನು ತೆಗೆದುಕೊಳ್ಳಲು ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಕಾರ್ಯಕಾರಿ ಸಮಿತಿಗೆ ಅಧಿಕಾರ ನೀಡಲಾಗಿದೆ. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 261 ವೆಚ್ಚ 8/2010, ದಿನಾಂಕ 12–05–2010 ಹಾಗೂ ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 64 ಎಂಅಂಡ್ಇ 2009, ದಿನಾಂಕ 01–07–2010ರ ಹಾಗೂ ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ: ಸಿ/390/2010ರ ಅನುಮೋದನೆಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಐ. ಎಫ್. ಮಾಗಿ)**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 2672 ಶಿಕ್ಷಣ ಇಲಾಖೆ (ಯೋಜನೆ)

**ಕಾರ್ಮಿಕ ಸಚಿವಾಲಯ**

**ವಿಷಯ :** ಬೆಂಗಳೂರು ಹಾಗೂ ಗುಲ್ಬರ್ಗಾ ಜಿಲ್ಲೆಗಳಲ್ಲಿ ಕರ್ನಾಟಕ ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂ. ಡಿಇಟಿ/ಟಿಆರ್‌ಜಿ/ಪಿಎಲ್ಎನ್–1/ಸಿಆರ್–85/2009–10, ದಿನಾಂಕ : 18–6–2010.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯವು ಇತ್ತೀಚಿನ ವರ್ಷಗಳಲ್ಲಿ ಆರ್ಥಿಕ ಹಾಗೂ ಕೈಗಾರಿಕೋದ್ಯಮಗಳ ಕ್ಷೇತ್ರದಲ್ಲಿ ಗಮನಾರ್ಹ ಬೆಳವಣಿಗೆಯನ್ನು ಹೊಂದಿದ್ದು, ನುರಿತ ಕೌಶಲ್ಯಯುಕ್ತ ಮಾನವ ಸಂಪನ್ಮೂಲದ ಬೇಡಿಕೆಯೂ ಗಣನೀಯವಾಗಿ ಸಾಂಪ್ರದಾಯಿಕ ವಲಯಗಳಲ್ಲಿ ಹಾಗೂ ಮುಖ್ಯವಾಗಿ ಹೊಸದಾಗಿ ಹೊರಹೊಮ್ಮುತ್ತಿರುವ ತಾಂತ್ರಿಕ ವಲಯದಲ್ಲಿ ಹೆಚ್ಚಾಗಿರುತ್ತದೆ. ಅಲ್ಲದೇ, ಜಾಗತಿಕ ಹೂಡಿಕೆದಾರರ ಸಮಾವೇಶದಿಂದಾಗಿ ನಾಲ್ಕು ಲಕ್ಷ ಕೋಟಿ ರೂಪಾಯಿಗಳ ಹೂಡಿಕೆಗೆ ಒಪ್ಪಲಾಗಿದ್ದು, ಇದರಿಂದಾಗಿ ಅಂತರಾಷ್ಟ್ರೀಯ ಗುಣಮಟ್ಟದ ಕೌಶಲ್ಯ ಹೊಂದಿರುವ ಮಾನವ ಸಂಪನ್ಮೂಲದ ಬೇಡಿಕೆಯು ಹೆಚ್ಚಾಗಿರುತ್ತದೆ. ಆದ್ದರಿಂದ ರಾಜ್ಯದ ಯುವ ಜನರು ಉತ್ಪಾದನಾ ಹಾಗೂ ಸೇವಾಕ್ಷೇತ್ರದಲ್ಲಿ ಲಭ್ಯವಿರುವ ಉದ್ಯೋಗಾವಕಾಶಗಳನ್ನು ಪಡೆದುಕೊಳ್ಳಲು, ಉದ್ಯೋಗಾರ್ಹರನ್ನಾಗಿಸುವ ಅಗತ್ಯವಿದ್ದು, ಆಯಾ ಕ್ಷೇತ್ರದ ಬೇಡಿಕೆಗನುಗುಣವಾಗಿ ಕೌಶಲ್ಯತೆಯನ್ನು ಸಿದ್ದಪಡಿಸುವುದು ಅಗತ್ಯವಿದೆ.

ಸುಧಾರಿತ ಕೌಶಲ್ಯತೆ ಹಾಗೂ ತರಬೇತಿ ನೀಡುವ ಮುಖಾಂತರ ಯುವ ಜನರು ಸ್ಥಳೀಯ, ರಾಷ್ಟ್ರ ಮಟ್ಟದ ಅಥವಾ ಜಾಗತಿಕ ಉದ್ಯೋಗ ಮಾರುಕಟ್ಟೆಯಲ್ಲಿ ಉದ್ಯೋಗ ಪಡೆದುಕೊಳ್ಳಲು ಸಾಮರ್ಥ್ಯರನ್ನಾಗಿಸುವ ದೃಷ್ಟಿಕೋನವನ್ನು ರಾಜ್ಯ ಸರ್ಕಾರ ಹೊಂದಿರುತ್ತದೆ. ಈ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರವು ಬೆಂಗಳೂರು ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಕರ್ನಾಟಕ ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರಗಳನ್ನು ಪ್ರಾರಂಭಿಸಿ ಅಂತರ ರಾಷ್ಟ್ರ ಗುಣಮಟ್ಟದಲ್ಲಿ ಅತ್ಯುನ್ನತ ತರಬೇತಿಯನ್ನು ಆಧುನಿಕ ತಂತ್ರಜ್ಞಾನ ಹೊಂದಿರುವ ಜರ್ಮನ್ ತಂತ್ರಜ್ಞಾನ ನಿಗಮದ ಜಿ.ಟಿ.ಝಡ್–ಐ.ಎಸ್. ಸಹಯೋಗದೊಂದಿಗೆ ಅನುಷ್ಠಾನಗೊಳಿಸಲು ಉದ್ದೇಶಿಸಿದೆ. ಇದಕ್ಕೆ ಸಂಬಂಧಿಸಿದಂತೆ ಉಲ್ಲೇಖ (1) ರಲ್ಲಿನ ಪತ್ರದ ಮೂಲಕ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಾಇ 193 ಇಟಿಐ 2010, ಬೆಂಗಳೂರು, ದಿನಾಂಕ : 26–10–2010**

ಬೆಂಗಳೂರು ಮತ್ತು ಗುಲ್ಬರ್ಗಾದಲ್ಲಿ ಕರ್ನಾಟಕ ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸಲು ಮತ್ತು ಇವುಗಳನ್ನು ಸೊಸೈಟಿ ನಿಯಮಗಳಡಿಯಲ್ಲಿ ನೋಂದಾಯಿಸಲು ಮಂಜೂರಾತಿ ನೀಡಲಾಗಿದೆ.

ಈ ಕೇಂದ್ರಗಳಿಗೆ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಅನುಬಂಧದಲ್ಲಿ ಲಗತ್ತಿಸಿದಂತೆ ಆಡಳಿತ ಪರಿಷತ್ತನ್ನು ರಚಿಸಲಾಗಿದೆ.

2011–12 ನೇ ಸಾಲಿನಿಂದ ಶೇ 50 ರಷ್ಟು ಯೋಜನಾ ವೆಚ್ಚವನ್ನು ರಾಜ್ಯ ಸರ್ಕಾರದ ಪಾಲಾಗಿ ನೀಡಲು ಹಾಗೂ 2011–12 ರಲ್ಲಿ ಕೋರ್ಸುಗಳನ್ನು ಪ್ರಾರಂಭಿಸಲು ಪೂರ್ವಸಿದ್ಧತಾ ಕೆಲಸಗಳಾದ ತರಬೇತಿ ಮಾಡ್ಯೂಲುಗಳ ಅಭಿವೃದ್ಧಿ, ಸಿಬ್ಬಂದಿ ತರಬೇತಿ ಮೊದಲಾದ ಕೆಲಸಗಳಿಗೆ ರೂ. 50 ಲಕ್ಷ ಪಾವತಿಸಲು ಕರ್ನಾಟಕ ವೃತ್ತಿ ತರಬೇತಿ ಮತ್ತು ಕೌಶಲ್ಯ ಅಭಿವೃದ್ಧಿ ನಿಗಮ ಇವರಿಗೆ ಪ್ರಾಧಿಕಾರ ನೀಡಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ನಿಗಮದ ಉದ್ದೇಶಿತ ಕೈಗಾರಿಕಾ ವಸಾಹತು ಗುಲ್ಬಾರ್ಗಾದಲ್ಲಿ 20 ಎಕರೆ ಭೂಮಿಯನ್ನು ಪಡೆಯಲು ಮುಂದಿನ ಕ್ರಮ ವಹಿಸಲು ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಪಿಡಿ 95 ಎಂ ಅಂಡ್ ಇ 2010, ದಿನಾಂಕ : 25–9–2010 ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 668 ವೆಚ್ಚ–9/10 ಆರ್‌ಎಫ್ ನಂ. 45076, ದಿನಾಂಕ : 29–9–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎ.ಎಸ್. ವಿಶ್ವೇಶ್ವರಯ್ಯ)**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಅನುಬಂಧ

**ಬೆಂಗಳೂರು ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿನ ಕರ್ನಾಟಕ ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರದ ಆಡಳಿತ ಪರಿಷತ್ತು**

| | | |
|---|---|---|
| 1. | ಅಧ್ಯಕ್ಷರು | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು,<br>ಕರ್ನಾಟಕ ಸರ್ಕಾರ |
| 2. | ಉಪಾಧ್ಯಕ್ಷರು | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಸರ್ಕಾರದ ಕಾರ್ಯದರ್ಶಿಗಳು ಕಾರ್ಮಿಕ ಇಲಾಖೆ, ಕರ್ನಾಟಕ ಸರ್ಕಾರ |
| 3. | ಸದಸ್ಯ ಕಾರ್ಯದರ್ಶಿಗಳು | ಆಯುಕ್ತರು,<br>ಉದ್ಯೋಗ ಮತ್ತು ತರಬೇತಿ ಇಲಾಖೆ |
| | ಸದಸ್ಯರು | |
| 4. | ಕೇಂದ್ರ ಸರ್ಕಾರ | ಡಿ.ಜಿ.ಇ.ಟಿ. ನವದೆಹಲಿ ಇವರ ವತಿಯಿಂದ ಒಬ್ಬ ಪ್ರತಿನಿಧಿ |
| 5. | ಆರ್ಥಿಕ ಇಲಾಖೆ | ಒಬ್ಬ ಪ್ರತಿನಿಧಿ |
| 6. | ಉದ್ಯೋಗ ಮತ್ತು ತರಬೇತಿ | ಎರಡು ಜಂಟೀ ನಿರ್ದೇಶಕರು |
| 7. | ಜಿ.ಟಿ.ಝಡ್–ಐಎಸ್ | ಎರಡು ಪ್ರತಿನಿಧಿಗಳು |
| 8. | ನಿರ್ದೇಶಕರು, ತಾಂತ್ರಿಕ ಶಿಕ್ಷಣ | ಒಬ್ಬ ಪ್ರತಿನಿಧಿ |
| 9. | ವಿವಿಧ ಕೌಶಲ್ಯ ಅಭಿವೃದ್ಧಿ ಕೇಂದ್ರ, ಬೆಂಗಳೂರು | ನಿರ್ದೇಶಕರು |
| | ಕೈಗಾರಿಕೋದ್ಯಮಗಳ ಸಂಘ ಸಂಸ್ಥೆಗಳು | |
| 10. | ಬಿ.ಸಿ.ಐ.ಸಿ. | ಒಬ್ಬ ಪ್ರತಿನಿಧಿ |
| 11. | ಎಫ್.ಕೆ.ಸಿ.ಸಿ.ಐ. | ಒಬ್ಬ ಪ್ರತಿನಿಧಿ |
| 12. | ಸಿ.ಐ.ಐ. | ಒಬ್ಬ ಪ್ರತಿನಿಧಿ |
| | ಕೈಗಾರಿಕಾ ಮತ್ತು ತಾಂತ್ರಿಕ ತರಬೇತಿ ಸಂಸ್ಥೆಗಳು | |
| 13. | ಬಾಷ್ | ಒಬ್ಬ ಪ್ರತಿನಿಧಿ |
| 14. | ಜಿ.ಟಿ.ಟಿ.ಸಿ. | ಒಬ್ಬ ಪ್ರತಿನಿಧಿ |
| 15. | ಬಿ.ಹೆಚ್.ಇ.ಎಲ್. | ಒಬ್ಬ ಪ್ರತಿನಿಧಿ |
| 16. | ಹೆಚ್.ಎ.ಎಲ್. | ಒಬ್ಬ ಪ್ರತಿನಿಧಿ |
| 17. | ಟಿ.ಐ.ಟಿ.ಐ. | ಒಬ್ಬ ಪ್ರತಿನಿಧಿ |
| 18. | ಎನ್.ಟಿ.ಟಿ.ಎಫ್. | ಒಬ್ಬ ಪ್ರತಿನಿಧಿ |
| 19. | ಸನದಿ ಲೇಖಾಪಾಲಕ (ಚಾರ್ಟರ್ಡ್ ಅಕೌಂಟೆಂಟ್) | ಗೌವರ್ನರ್ ಕೌನ್ಸಿಲ್‌ನಿಂದ ನೇಮಿಸುವುದು |

**(ಎ.ಎಸ್. ವಿಶ್ವೇಶ್ವರಯ್ಯ)**
ಪಿ. ಆರ್. 2681 ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಕುಮಾರಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ ಮತ್ತು ದ್ವಿತೀಯ ದರ್ಜೆ ಸಹಾಯಕರುಗಳಾದ ಶ್ರೀ ಎಸ್.ಜೆ. ಪರ್ವತೀಕರ ಮತ್ತು ಶ್ರೀ ಜಿ.ಎಸ್. ಅರವಿಂದ ಇವರುಗಳ ವಿರುದ್ಧ ಜಂಟಿ ವಿಚಾರಣೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಎಲ್–37/ಸಿಆರ್–14/2009/ಬಿಜಿಎಂ, ದಿನಾಂಕ 21–5–2010.
2. ಸರ್ಕಾರಿ ಆದೇಶ ಸಂಖ್ಯೆ : ಆಇ 19 ವಾತೆತ 2010, ದಿನಾಂಕ : 5–8–2010.
3. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಎಲ್–37/ಸಿಆರ್–14/ 2009/ಬಿಜಿಎಂ, ದಿನಾಂಕ : 23–8–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಂತೆ ಶ್ರೀ ಕುಮಾರಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ ಮತ್ತು ದ್ವಿತೀಯ ದರ್ಜೆ ಸಹಾಯಕರುಗಳಾದ ಶ್ರೀ ಎಸ್.ಜೆ. ಪರ್ವತೀಕರ ಮತ್ತು ಶ್ರೀ ಜಿ.ಎಸ್. ಅರವಿಂದ ಇವರುಗಳ ವಿರುದ್ಧ ಲಂಚ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 13 ರಂತೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಪ್ರಕರಣವನ್ನು ಸದರಿ ನಿಯಮಗಳ ನಿಯಮ 14–ಎ ರನ್ವಯ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ವಹಿಸಲಾಗಿತ್ತು.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು, ಸರ್ಕಾರದ ಹಂತದಲ್ಲಿ ಇಲಾಖಾ ವಿಚಾರಣೆಯನ್ನು ಕೈಗೊಳ್ಳುವಂತೆ ಮಾತ್ರ ಕೋರಿರುತ್ತಾರೆ. ಸದರಿ ಆರೋಪಿತ ಅಧಿಕಾರಿ/ನೌಕರರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಂಬಂಧ ಮಾನ್ಯ ಲೋಕಾಯುಕ್ತರು ಅಥವಾ ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 12(3) ರಡಿಯಲ್ಲಿ ಪ್ರತ್ಯೇಕ ವರದಿಯನ್ನು ಕಳುಹಿಸಿ, ಇಲಾಖಾ ವಿಚಾರಣೆಗಾಗಿ ಪ್ರಕರಣ ವಹಿಸಲು ಶಿಫಾರಸ್ಸು ಮಾಡಿದಲ್ಲಿ ಮಾತ್ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14–ಎ ರಡಿಯಲ್ಲಿ ಸದರಿ ಆರೋಪಿತ ನೌಕರರ ವಿರುದ್ಧ ಇಲಾಖಾ ವಿಚಾರಣೆಗಾಗಿ ಪ್ರಕರಣವನ್ನು ಮಾನ್ಯ ಲೋಕಾಯುಕ್ತರು ಅಥವಾ ಉಪ ಲೋಕಾಯುಕ್ತರವರಿಗೆ ವಹಿಸಬಹುದಾಗಿದೆ. ಆದುದರಿಂದ ಸರ್ಕಾರಿ ಆದೇಶ ದಿನಾಂಕ : 5–8–2010ರ ಪ್ರಕಾರ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲಾಗಿಲ್ಲ ಎಂದು ತಿಳಿಸಿ, ಈ ಪ್ರಕರಣದ ಇಲಾಖಾ ವಿಚಾರಣೆಯನ್ನು ಮಾನ್ಯ ಲೋಕಾಯುಕ್ತರಿಗೆ ವಹಿಸಿರುವುದನ್ನು ಹಿಂತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಕರ್ನಾಟಕ ಲೋಕಾಯುಕ್ತದ ನಿಬಂಧಕರ ಪತ್ರವನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 19 ವಾತೆತ 2010, ಬೆಂಗಳೂರು, ದಿನಾಂಕ : 13–10–2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ಹಿಂದೆ ಹೊರಡಿಸಲಾಗಿದ್ದ ಸರ್ಕಾರಿ ಆದೇಶ ಸಂಖ್ಯೆ : ಆಇ 19 ವಾತೆತ 2010 ದಿನಾಂಕ : 5–8–2010ನ್ನು ಹಿಂತೆಗೆದುಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಂ.ಆರ್. ಚಂದ್ರಶೇಖರಾರಾಧ್ಯ)**

ಪೀಠಾಧಿಕಾರಿ

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

ಪಿ. ಆರ್. 2682

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2009–10ನೇ ಸಾಲಿನ ಕೊನೆಯ ಕಂತಿನ ಅನುದಾನವನ್ನು ಮರುಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
(1) ಸರ್ಕಾರಿ ಆದೇಶ ಸಂಖ್ಯೆ: ಯೋಇ 39 ಯೋವಿವಿ 2009 ದಿನಾಂಕ 25–02–2010.
(2) ಸರ್ಕಾರಿ ಆದೇಶ ಸಂಖ್ಯೆ: ಯೋಇ 39 ಯೋವಿವಿ 2009 ದಿನಾಂಕ 16–08–2010.

**ಪ್ರಸ್ತಾವನೆ :**

ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2009–10ನೇ ಸಾಲಿನಲ್ಲಿ ಅನುಮೋದನೆಗೊಂಡ ಕಾಮಗಾರಿಗಳಿಗೆ ಉಪಯೋಗಿಸಿಕೊಳ್ಳಲು ಲೆಕ್ಕಶೀರ್ಷಿಕೆ "2575–60–265–0–02–059 (ಯೋಜನೆ)" ಅಡಿಯಲ್ಲಿ ತಲಾ ರೂ. 50.00 ಲಕ್ಷದಂತೆ ಒಟ್ಟು ರೂ. 150.00 ಕೋಟಿಗಳನ್ನು ಕೊನೆಯ ಕಂತಾಗಿ ಮೇಲೆ ಓದಲಾದ (1) ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು. ಬಿಡುಗಡೆಯಾದ ಅನುದಾನವನ್ನು ಡಿ.ಸಿ. ಬಿಲ್ಲಿನ ಮೂಲಕವೇ ಡ್ರಾ ಮಾಡಲು ತಿಳಿಸಲಾಗಿತ್ತು. ದಿನಾಂಕ: 31–03–2010 ರೊಳಗಾಗಿ ಬಳಕೆಯಾಗದೇ ಇರುವ ಅನುದಾನದ ವಿವರಗಳನ್ನು ಜಿಲ್ಲಾಧಿಕಾರಿಗಳಿಂದ ಪಡೆಯಲಾಗಿದೆ. ಅದರಂತೆ, ಮೇಲೆ ಓದಲಾದ (2)ರ ಆದೇಶದಲ್ಲಿ ಅನುದಾನವನ್ನು ಮರು ಬಿಡುಗಡೆ ಮಾಡಲಾಯಿತು. ವಿಧಾನ ಪರಿಷತ್ ಸದಸ್ಯರಾದ ಶ್ರೀ ಶಿವರಾಜ ಸಜ್ಜನರರವರು ಈಗಾಗಲೇ ಮೇಲೆ ಓದಲಾದ (1) ರ ಆದೇಶದಲ್ಲಿನ ಅನುದಾನವನ್ನು ಸಂಪೂರ್ಣವಾಗಿ ಬಳಸಿಕೊಂಡಿರುವ ಬಗ್ಗೆ ಜಿಲ್ಲಾಧಿಕಾರಿಗಳಿಂದ ಮಾಹಿತಿ ಸ್ವೀಕೃತವಾಗಿದ್ದು ಮೇಲೆ ಓದಲಾದ (2) ರ ಆದೇಶದಲ್ಲಿ ಅವರಿಗೆ ಬಿಡುಗಡೆ ಮಾಡಿದ ಅನುದಾನವನ್ನು ಹಿಂಪಡೆಯಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 39 ಯೋವಿವಿ 2009, ಬೆಂಗಳೂರು, ದಿನಾಂಕ 23ನೇ ಆಗಸ್ಟ್ 2010**

ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ ಅಡಿಯಲ್ಲಿ 2010-11ನೇ ಸಾಲಿನ ಹಾವೇರಿ ಜಿಲ್ಲೆಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಶಿವರಾಜ ಸಜ್ಜನರರವರಿಗೆ ದಿನಾಂಕ: 16-08-2010ರ ಸಮಸಂಖ್ಯೆಯ ಆದೇಶದಲ್ಲಿ ಬಿಡುಗಡೆ ಮಾಡಿದ ರೂ. 50.00 ಲಕ್ಷಗಳ ಅನುದಾನವನ್ನು ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 2266

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಬಾಡಿಗೆದಾರರ ಕ್ಷೇಮಾಭಿವೃದ್ಧಿ ಕೇಂದ್ರ ಸಮಿತಿ (ರಿ), ಬೆಂಗಳೂರು ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 83 ಮುನೋನೊ 2006 ದಿ: 3-5-2008.
(2) ಸರ್ಕಾರದ ಆದೇಶ ಸಂಖ್ಯೆ: ಸಇ 79 ಸಸಂನೋ 2008 ದಿನಾಂಕ: 12-3-2009.
(3) ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಂಎಜಿ/ಸಿಆರ್/04/08-09 ದಿನಾಂಕ: 9-7-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ದಿನಾಂಕ: 3-5-2008 ರ ಸರ್ಕಾರದ ಆದೇಶದಲ್ಲಿ, ಕರ್ನಾಟಕ ಬಾಡಿಗೆದಾರರ ಕ್ಷೇಮಾಭಿವೃದ್ಧಿ ಕೇಂದ್ರ ಸಮಿತಿ (ರಿ). ಬೆಂಗಳೂರು ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27ಎ ಪ್ರಕಾರ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಂಘದ ಹಿತದೃಷ್ಟಿಯಿಂದ ಉಪ ವಿಭಾಗಾಧಿಕಾರಿ, ಬೆಂಗಳೂರು ದಕ್ಷಿಣ ಇವರನ್ನು ಆಡಳಿತಾಧಿಕಾರಿಯಾಗಿ ಆರು ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 12-3-2009 ರ ಸರ್ಕಾರದ ಆದೇಶದಲ್ಲಿ, ಉಪ ವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಇವರ ದಿನಾಂಕ: 27-1-2009 ರ ಪತ್ರದಲ್ಲಿ, ಮೇಲಿನ ಆದೇಶದಲ್ಲಿನ ಅವಧಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಹಿಂದಿನ ಉಪ ವಿಭಾಗಾಧಿಕಾರಿಗಳು ಸದರಿ ಸಂಸ್ಥೆಯ ಆಡಳಿತವನ್ನು ವಹಿಸಿಕೊಂಡಿರುವುದಿಲ್ಲವೆಂದು ನಂತರ ಅವರು ದಿನಾಂಕ 14-7-2008 ರಂದು ಸಂಸ್ಥೆಯ ಅಧಿಕಾರವನ್ನುವಹಿಸಿಕೊಂಡಿದ್ದು, ಆದ್ದರಿಂದ, ಸಂಸ್ಥೆಯ ಆಡಳಿತ ಮಂಡಳಿಗೆ ನೇಮಕ ಮಾಡಿರುವ ಆಡಳಿತಾಧಿಕಾರಿಯವರ ಅವಧಿಯನ್ನು ಇನ್ನೂ ಆರು ತಿಂಗಳ ಕಾಲ ವಿಸ್ತರಿಸಲು ಕೋರಿದ್ದು, ಅದರಂತೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ಪ್ರಕಾರ ನೇಮಿಸಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 3-11-2008 ರಿಂದ ಮತ್ತೆ ಆರು ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿ, ಸದರಿ ಅವಧಿಯಲ್ಲಿ ಆಡಳಿತಾಧಿಕಾರಿಗಳು ಸದರಿ ಸಂಸ್ಥೆಗೆ ಚುನಾವಣೆಯನ್ನು ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸಹ ಸೂಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರ ದಿನಾಂಕ: 9-7-2010 ರ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ, ಬೆಂಗಳೂರು ರವರ ಪತ್ರದಲ್ಲಿ, ಕರ್ನಾಟಕ ಬಾಡಿಗೆದಾರರ ಕ್ಷೇಮಾಭಿವೃದ್ಧಿ ಕೇಂದ್ರ ಸಮಿತಿ (ರಿ), ಬೆಂಗಳೂರು ಈ ಸಂಘದ ಆಡಳಿತಾಧಿಕಾರಿಗಳ ಅವಧಿಯು ದಿನಾಂಕ: 2-5-2009 ಕ್ಕೆ ಮುಕ್ತಾಯವಾಗಿದ್ದು, ಸಂಘಕ್ಕೆ ಚುನಾವಣೆ ನಡೆಸಲು ಅನುಕೂಲವಾಗುವಂತೆ ಉಪ ವಿಭಾಗಾಧಿಕಾರಿಗಳನ್ನು ಆಡಳಿತಾಧಿಕಾರಿಯನ್ನಾಗಿ ಮುಂದಿನ ಆರು ತಿಂಗಳ ಅವಧಿಗೆ ವಿಸ್ತರಿಸುವಂತೆ ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆರವರನ್ನು ಕೋರಿದ್ದು, ಅದರಂತೆ, ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು ಇವರು ಆಡಳಿತಾಧಿಕಾರಿಗಳ ಅವಧಿಯನ್ನು ಮುಂದಿನ ಆರು ತಿಂಗಳ ಅವಧಿಗೆ ವಿಸ್ತರಿಸಬಹುದೆಂದು ಸರ್ಕಾರಕ್ಕೆ ಅಭಿಪ್ರಾಯ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 79 ಸಸಂನೋ 2008, ಬೆಂಗಳೂರು, ದಿನಾಂಕ 19-8-2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಬಾಡಿಗೆದಾರರ ಕ್ಷೇಮಾಭಿವೃದ್ಧಿ ಕೇಂದ್ರ ಸಮಿತಿ(ರಿ), ಬೆಂಗಳೂರು ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27ಎ ಪ್ರಕಾರ ನೇಮಿಸಲಾಗಿರುವ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ: 12-3-2009 ರ ಆದೇಶದಲ್ಲಿ ದಿನಾಂಕ: 3-11-2008 ರಿಂದ 6 ತಿಂಗಳ ಅವಧಿಗೆ ಮುಂದುವರೆಸಿ ಆದೇಶಿಸಲಾಗಿದ್ದು, ಸದರಿ ಅವಧಿಯು ದಿನಾಂಕ: 2-5-2009 ಕ್ಕೆ ಮುಗಿದಿದ್ದು, ಮತ್ತೆ ದಿನಾಂಕ: 3-5-2009 ರಿಂದ 2-11-2009, 3-11-2009 ರಿಂದ 2-5-2010 ಮತ್ತು 3-5-2010 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆಯನ್ನು ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆಯೂ ಸಹ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 2267

## INFORMATION TECHNOLOGY BIOTECHNOLOGY AND SCIENCE AND TECHNOLOGY SECRETARIAT

**Sub:** 1) Re-Constitution Vision Group on Nanotechnology

**Read:** 1. Government Order No. DST 156 STS 2007, Dated 29-10-2007

2) Proceedings of the 4th Meeting of the Vision Group on Nano Technology held on 08-03-2010.

**Preamble:**

In the Government Order read at 1) above Vision Group on Nanotechnology was constituted under the Chairmanship of Prof. C.N.R.. Rao, F.R.S. Chairman, Scientific Advisory Council to the Prime Minister, National Research Professor, Linus Pauling Research Professor and Honorary President, Jawaharlal Nehru Centre for Advanced Scientific Research, Bangalore with 14 members, to advise the State Government in so far as Nano-Science and Nanotechnology is concerned.

In the Proceedings of the 4th Meeting held on 08-03-2010 read at (2) above, the Chairman of the Vision Group on Nanotechnology has suggested to re-constitute the Vision Group with certain changes in the Members

Hence this Order

**Government Order No. DST 156 STS 2007. Bangalore Dated 18.8.2010**

The Government of Karnataka is pleased to re-constitute the Vision Group on Nanotechnology, headed by Prof. C.N.R. Rao, F.R.S. Chairman, Scientific Advisory Council to the Prime Minister, National Research Professor, Linus Pauling Research professor and Honorary President, Jawaharlal Nehru Centre for Advanced Scientific Research, Jakkur, with the following as members.

| | | |
|---|---|---|
| **1** | **Prof. C.N.R. Rao, F.R.S.**<br>Chairman, Scientific Advisory Council to the Prime Minister,<br>National Research Professor,<br>Llinus Pauling Research professor and Honorary President,<br>Jawaharlal Nehru Centre for Advanced Scientific Research, Jakkur Campus, Bangalore-560064<br>Phone-080-22082761<br>Fax-080-22082760<br>E-mail;cnrrao@jncasr.ac.in | **Chairman** |
| **2** | **Prof. P. Balaram,**<br>Director,<br>Indian Institute of Science, Bangalore-560 012<br>Phone-080-22932222, 23600690<br>E-mail:diroff@admin.iisc.ernet.in | **Member** |
| **3** | **Prof. Rudra Pratap**<br>Chairman,<br>Cranes Software International Ltd.,<br>Head, Cranes Software's MEMS Research Initiative (IISc), Department of Mechanical Engineering, Indian Institute of Science, No. 208 E. 1st floor, Bangalore-560012.<br>Phone-080-41120000, 22933224<br>Fax; 080-41231274 / 23608659<br>EMail:info@cranessoftware.com/pratap@mecheng.iisc.ernet.in | **Member** |
| **4** | **Prof. Rajendra Jagadale,**<br>Director General & CEO,<br>Science & Technology Park,<br>University of Pune, Ganeshkhind Road<br>PUNE-411007<br>Phone-020-25699206<br>Fax-022-24145614<br>E-mail: rajendra.jagdale@gmail.com | **Member** |

| | | |
|---|---|---|
| **5** | **Prof. G.D. Yadav,**<br>Dean,<br>Research, Consultancy and Resource Mobilization, Head, Department of Chemical Engineering, University Institute of Chemical Technology (UICT), University of Mumbai, Matunga, MUMBAI-400019<br>Phone-022-24145616/19/26/29/31<br>Fax-022-24145614<br>E-mail: gdy@udct.org/gdyadav@udct.org | **Member** |
| **6** | **Dr. Praveer Asthana**<br>Science and Engineering Research Council (SERC) Division,<br>Department of Science and Technology,<br>Technology Bhavan, New Delhi-110 016<br>Phone-011-26590376,<br>E-mail:pasthana@nic.in | **Member** |
| **7** | **Prof. Ajay K Sood,**<br>Professor,<br>Department of Physics,<br>Indian Institute of Science, Bangalore-560 012..<br>Phone-080-22932964; 23602238<br>Fax – 080-23602602<br>E-Mail:asood@physics.iisc.ernet.in<br>asood1951@gmail.com | **Member** |
| **8** | **Dr. Ajit Sapre**<br>Group President of Research & Technology,<br>Reliance Industries Ltd.<br>Reliance Corporate Park, 7B Ground Floor,<br>Thane-Belapur Road, Ghansoli,<br>Navi Mumbai-400701<br>E-mail: ajit.sapre@ril.com<br>Tel No.:022-44783471 | **Member** |
| **9** | **Dr. Satyajit Mayor**<br>Professor,<br>Cellular Organization and Signaling Group,<br>National Center for Biological Sciences (NCBS),<br>GKVK, Bellary Road, Bangalore-560065<br>Phone-080-23666001/02, 23666018/<br>080-67176001/02,67176018/19<br>FAX-080-23636662<br>E-mail-mayor@ncbs.res.in | **Member** |
| **10** | **Dr. G.Sundararajan**<br>Director,<br>International advanced Research Centre for Power Metallurgy and new Materials (ARCI),<br>Balapur post, Hyderabad-500005<br>Andhra Pradesh, India<br>FAX:040-24442699, 24443168<br>E-mail: info@arci.res.in | **Member** |
| **11** | **Dr. R.K. Malhotra**<br>Executive Director (R&D)<br>Indian Oil Corporation Limited Research & Development centre,<br>Sector – 13, Faridabad – 121 007, Hariyana<br>Tel No: 0129-2283710<br>Fax No: 0129-2283711<br>E-mail: malhotrak@iocrd.co.in/malhotrak@iocl.co.in | **Member** |

| | | |
|---|---|---|
| 12 | **Mr. Puneet Mehrotra**<br>Director,<br>Nano Science and Technology Consortium<br>A-105, Sector 63, Noida (U.P.) 201301<br>INDIA<br>Tel No: 0120-4330376<br>Mobile: 09810367262<br>E-mail: puneet.mehrotra@nstc.in | **Member** |
| 13 | **Prof. V. Ramgopal Rao**<br>Department of Electrical Engineering,<br>Indian Institute of Technology, Bombay,<br>Powai, Mumbai-400076<br>Maharashtra<br>Phone-022-25767440<br>E-mail-rrao@ee.iitb.ac.in | **Member** |
| 14 | **Mr. Ashok Kumar C. Manoli,**<br>Principal Secretary to Government,<br>Department of Information Technology,<br>Biotechnology & Science and Technology,<br>6th floor, 5th stage, MS Building, Bangalore-560001<br>Phone-080-22280562, 22032434<br>FAX:080-22288340 | **Member Secretary** |

The Vision Group on Nanotechnology would be an apex body, which will submit its recommendations and suggestions to the Department of Information Technology, Biotechnology & Science and Technology, Government of Karnataka for consideration and necessary action.

By Order and in the name of the Governor of Karnataka

**K.BORALINGAIAH**

P.R. 2268

Under Secretary to Government

Department of Information Technology

Biotechnology & Science and Technology

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ, ಈ ಕಾರ್ಖಾನೆಯ 2010–11ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ಕಾಗಿ ಸರ್ಕಾರದಿಂದ ದುಡಿಯುವ ಬಂಡವಾಳ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ. ಸಿಐ 184 ಎಸ್‌ಜಿಎಫ್ 2007 ದಿನಾಂಕ: 23–07–2010.
2) ಸರ್ಕಾರದ ಆದೇಶ ಸಂಖ್ಯೆ: ಸಿಐ 49 ಎಸ್‌ಜಿಎಫ್ 2010 ದಿನಾಂಕ 19–08–2010.
3) ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆರವರ ಪತ್ರ ಸಂಖ್ಯೆ: ಎಂಎಸ್‌ಕೋ/ಎಂಡಿ/ಡಿಓ/2010/71 ದಿನಾಂಕ 06–07–2010.
4) ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: ಎಂಎಸ್‌ಕೋ/ಎಂಡಿ/2010/86 ದಿನಾಂಕ 10.08.2010.
5) ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ/1384/ವೆಚ್ಚ–1/2010 ದಿನಾಂಕ 21–08–2010.

**ಪ್ರಸ್ತಾವನೆ :**

ಮೇಲೆ ಓದಲಾದ (2) ಮತ್ತು (3) ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರಗಳಲ್ಲಿ ಕಾರ್ಖಾನೆಯ 2010–11ನೇ ಸಾಲಿನ ಕಬ್ಬು ಅರೆಯುವ ಕಾರ್ಯವನ್ನು 2010ರ ಜುಲೈ ತಿಂಗಳಿಂದ ಪ್ರಾರಂಭಿಸಿರುತ್ತಿರುವುದಾಗಿ ಈ ಉದ್ದೇಶಕ್ಕಾಗಿ ಜುಲೈ, ಆಗಸ್ಟ್, ಸೆಪ್ಟೆಂಬರ್, ಅಕ್ಟೋಬರ್, ನವೆಂಬರ್ ತಿಂಗಳುಗಳಿಗೆ ಒಟ್ಟು 31.05 ಕೋಟಿ ರೂ.ಗಳ ದುಡಿಯುವ ಬಂಡವಾಳದ ಅವಶ್ಯಕತೆ ಇದ್ದು, ಆಗಸ್ಟ್ ತಿಂಗಳಿಗಾಗಿ 15.00 ಕೋಟಿ ರೂ.ಗಳನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿದ್ದು, ಮೇಲೆ ಓದಲಾದ (2)ರಲ್ಲಿರುವ ದಿನಾಂಕ 19.08.2010ರ ಆದೇಶದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ ಮಂಡ್ಯ ಈ ಕಾರ್ಖಾನೆಯ 2010–11ನೇ ಸಾಲಿಗೆ ಕಾರ್ಖಾನೆಯ ಯಂತ್ರೋಪಕರಣಗಳ ಆಧುನೀಕರಣಕ್ಕಾಗಿ ಅನುದಾನದಲ್ಲಿ ಒದಗಿಸಲಾಗಿರುವ 2000.00 ಲಕ್ಷ ರೂ.ಗಳಲ್ಲಿ ಕಾರ್ಖಾನೆಯ ದುಡಿಯುವ ಬಂಡವಾಳಕ್ಕಾಗಿ 500.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ 2010–11ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ 2000.00 ಲಕ್ಷ ರೂ.ಗಳಲ್ಲಿ ಬಾಕಿ ಉಳಿದಿರುವ 597.78 ಲಕ್ಷ ರೂ.ಗಳು ಮತ್ತು ಹೆಚ್ಚುವರಿ ಅನುದಾನವಾಗಿ 402.22 ಲಕ್ಷ ರೂ.ಗಳನ್ನು ಒದಗಿಸಿ ಒಟ್ಟು

1000.00 ಲಕ್ಷ ರೂ.ಗಳನ್ನು ಕಾರ್ಖಾನೆಯ ದುಡಿಯುವ ಬಂಡವಾಳಕ್ಕಾಗಿ ಬಿಡುಗಡೆಗೊಳಿಸಲು ಮೇಲೆ ಓದಲಾದ (5)ರಲ್ಲಿರುವ ದಿನಾಂಕ 21.08.2010ರ ಅನಧಿಕೃತ ಟಿಪ್ಪಣಿಯಲ್ಲಿ ಸಹಮತಿಯಾಗಿದ್ದು, ಅದರಂತೆ ಹಣ ಬಿಡುಗಡೆಗೆ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 49 ಎಸ್‌ಜಿಎಫ್ 2010 ಬೆಂಗಳೂರು, ದಿನಾಂಕ 25–08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2010–11ನೇ ಸಾಲಿಗೆ ಕಾರ್ಖಾನೆಯ ಯಂತ್ರೋಪಕರಣಗಳ ಆಧುನೀಕರಣಕ್ಕಾಗಿ ಲೆಕ್ಕ ಶೀರ್ಷಿಕೆ "4860–04–190–1–00 (ಯೋಜನೆ) 211 – ಹೂಡಿಕೆ" ಅಡಿಯಲ್ಲಿ ಒದಗಿಸಲಾಗಿರುವ 2000.00 ಲಕ್ಷ ರೂ.ಗಳಲ್ಲಿ ಮೇಲೆ ಓದಲಾದ (1) ಮತ್ತು (2) ರಲ್ಲಿರುವ ಆದೇಶಗಳಲ್ಲಿ ಬಿಡುಗಡೆಗೊಳಿಸಿ ಬಾಕಿ ಉಳಿದಿರುವ 597.78 ಲಕ್ಷ ರೂ.ಗಳು, ಮತ್ತು ಇದೇ ಲೆಕ್ಕ ಶೀರ್ಷಿಕೆಗೆ ಹೆಚ್ಚುವರಿ ಅನುದಾನವಾಗಿ 402.22 ಲಕ್ಷ ರೂ.ಗಳನ್ನು ಒದಗಿಸಿ ಒಟ್ಟು 1000.00 ಲಕ್ಷ ರೂ.ಗಳನ್ನು (ಒಂದು ಸಾವಿರ ಲಕ್ಷ ರೂ.ಗಳು ಮಾತ್ರ) ಲೆಕ್ಕ ಶೀರ್ಷಿಕೆ 4860–04–190–1–00 (ಯೋಜನೆ) 211– ಹೂಡಿಕೆ ಅಡಿಯಲ್ಲಿ ಕಾರ್ಖಾನೆಯ ದುಡಿಯುವ ಬಂಡವಾಳಕ್ಕಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 54 ಬಿಆರ್‌ಎಸ್ 2010 ದಿನಾಂಕ 21.08.2010 ಮತ್ತು ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1384 ವೆಚ್ಚ–1/2010 ದಿನಾಂಕ 21.08.2010 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 2269

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ 07–08–1995.
2. ಸರ್ಕಾರಿ ಆದೇಶ ಸಂಖ್ಯೆ: ಯೋಇ 65 ಯೋವಿವಿ 2008 ದಿನಾಂಕ 04–02–2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ರಾಯಚೂರು ತಾಲ್ಲೂಕು ಕೆ.ಡಿ.ಪಿ.ಗೆ ನಾಮನಿರ್ದೇಶನ ಮಾಡಿದ್ದ ಆದೇಶವನ್ನು ರದ್ದುಪಡಿಸಿ, ಮಾನ್ಯ ಮುಖ್ಯಮಂತ್ರಿಗಳು ಅನುಮೋದಿಸಿರುವಂತೆ ರಾಯಚೂರು ಜಿಲ್ಲಾ ಕೆಡಿಪಿಗೆ ಈ ಕೆಳಕಂಡ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 47 ಯೋವಿವಿ 2010 ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2010**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಸದಸ್ಯರನ್ನು ರಾಯಚೂರು ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆ | ಅಭ್ಯರ್ಥಿಗಳ ಹೆಸರು |
|---|---|---|
| 1 | ರಾಯಚೂರು ಜಿಲ್ಲೆ | 1. ಶ್ರೀ ಜಿ. ಶೇಖರ ರೆಡ್ಡಿ, ರಾಯಚೂರು<br>2. ಶ್ರೀ ನಾಗರಾಜ ಗೌಡ, ಮಾನ್ವಿ<br>3. ಶ್ರೀಮತಿ ಮಮತಾ ಹಿರೇಮಠ, ಸಿಂಧನೂರು<br>4. ಶ್ರೀ ನರಸಿಂಹ ರೆಡ್ಡಿ, ಗುಂಜಳ್ಳಿ<br>5. ಶ್ರೀ ಹನುಮಂತರಾಯ ನಾಯಕಚಿಂತಲಕುಂಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 2270

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೈಲಹೊಂಗಲ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪ–1) ಸರ್ಕಾರದ ಅಂತಿಮ ಅನುಮೋದನೆ ನೀಡುವ ಸಂಬಂಧ.

**ಉಲ್ಲೇಖ :** (1) ಸರ್ಕಾರದ ಆದೇಶ ಸಂಖ್ಯೆ: ನಅಇ 18/ಬೆಮಪ್ರಾ/2008 ದಿನಾಂಕ: 15–02–2008.

(2) ಬೈಲಹೊಂಗಲ ಪುರಸಭಾ ಯೋಜನಾ ಪ್ರಾಧಿಕಾರದ ಪತ್ರ ಸಂಖ್ಯೆ: ಯೋಪ್ರಾಪುಸಸಬೈ/ ಮ.ಯೋ.ಪ–1 ಅಂ:2009–10/95 ದಿನಾಂಕ: 27–04–2010.

(3) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತ ಸಂಖ್ಯೆ: ನಯೋ(7)ಉನೀಯೋ(ವಿ)ರಾಮದುರ್ಗ/ಮಯೋಪ–1/ಅಂತಿಮ/10 ಯಲ್ಲಿ ನೀಡಿರುವ ಅಭಿಪ್ರಾಯ ದಿನಾಂಕ:

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಬೈಲಹೊಂಗಲ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪ–1)ಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2) ರ ಪತ್ರದಲ್ಲಿ ಬೈಲಹೊಂಗಲ ಪುರಸಭೆ ಯೋಜನಾ ಪ್ರಾಧಿಕಾರವು ಬೈಲಹೊಂಗಲ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪ–1) ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾ ಯೋಜನೆ (ಪರಿಷ್ಕೃತ–1) ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಕಡತದಲ್ಲಿ ರಾಮದುರ್ಗ ಪಟ್ಟಣದ ಜನಸಂಖ್ಯೆಯು 2021ನೇ ಇಸವಿಗೆ 72,000 ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆ (ಪ–1) ಯನ್ನು ತಯಾರಿಸಲಾಗಿದೆ. ಬೈಲಹೊಂಗಲ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 1495.57 ಹೆಕ್ಟೇರ್ ಪ್ರದೇಶದಲ್ಲಿ 725 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 725 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 379.62 ಹೆಕ್ಟೇರ್ (ಶೇ: 53.16) ವಾಣಿಜ್ಯಕ್ಕಾಗಿ 34.00 ಹೆಕ್ಟೇರ್ (ಶೇ: 4.76), ಕೈಗಾರಿಕೆಗಾಗಿ 22.23 ಹೆಕ್ಟೇರ್ (ಶೇ: 3.11), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ 80.54 ಹೆಕ್ಟೇರ್ (ಶೇ: 11.28), ಉದ್ಯಾನವನ ಮತ್ತು ಬಯಲು ಜಾಗಗಳಿಗೆ 35.11 ಹೆಕ್ಟೇರ್ (ಶೇ: 4.92), ಹಾಗೂ ನಾಗರೀಕ ಸೌಲಭ್ಯಕ್ಕಾಗಿ 4.40 ಹೆಕ್ಟೇರ್ (ಶೇ: 0.61) ಹಾಗೂ ಸಾರಿಗೆ/ಸಂಪರ್ಕ ವಲಯಕ್ಕೆ 158.22 ಹೆಕ್ಟೇರ್ (ಶೇ: 22.16) ಪ್ರದೇಶವನ್ನು ನಿಗದಿಪಡಿಸಲಾಗಿದೆ ಮಹಾ ಯೋಜನೆ (ಪ–1) ಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆ (ಪ–1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3) ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 189 ಬೆಮಪ್ರಾ 2010, ಬೆಂಗಳೂರು, ದಿನಾಂಕ 16–8–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೈಲಹೊಂಗಲ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪ–1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ ಸರ್ಕಾರವು ಅಂತಿಮ ಅನುಮೋದನೆಯನ್ನು ನೀಡಲಾಗಿದೆ. ಮಹಾ ಯೋಜನೆ (ಪ–1)ಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಷರತ್ತು: 1. ಈ ಆದೇಶದ ದಿನಾಂಕದಂದು 2 ವರ್ಷಗಳವರೆಗೆ ಪ್ರಾಧಿಕಾರವು ಯಾವುದೇ ಭೂ ಉಪಯೋಗ ಬದಲಾವಣೆಯನ್ನು ಸರ್ಕಾರಕ್ಕೆ ಸಲ್ಲಿಸಕೂಡದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

### ಬೈಲಹೊಂಗಲ ಪಟ್ಟಣದ ಮಹಾಯೋಜನೆ (ಪ–1) ಅಂತಿಮ ಅಂಕಿ ಅಂಶಗಳ ಸ್ಥೂಲ ನೋಟ

| ಕ್ರ. ಸಂ. | ಪರಿಶೀಲಿಸಬೇಕಾದ ವಿವರಗಳು | ವಿವರಣೆ |
|---|---|---|
| 1 | ಸ್ಥಳೀಯ ಯೋಜನಾ ಪ್ರದೇಶವನ್ನು ಸರ್ಕಾರವು ಘೋಷಿಸಿರುವ ವಿವರಗಳು | ಆದೇಶ ಸಂಖ್ಯೆ: ಯುಡಿಡಿ:335:ಟಿಟಿಪಿ:96, ದಿ:02.09.1996 |
| 2 | ಸ್ಥಳೀಯ ಯೋಜನಾ ಪ್ರದೇಶದ ವಿಸ್ತೀರ್ಣ | 1498.57 ಹೆಕ್ಟೇರ್ |
| 3 | ಕೆ.ಟಿ.ಸಿ.ಪಿ. ಕಾಯ್ದೆಯಡಿಯಲ್ಲಿ ಕಲಂ 10 ರಂತೆ ಕ್ರಮ | ಕರ್ನಾಟಕ ರಾಜ್ಯ ಪತ್ರದಲ್ಲಿ ದಿ: 16.11.06 ರಂದು ಪ್ರಕಟಿಸಿದೆ. |
| 4 | ಕೆ.ಟಿ.ಸಿ.ಪಿ. ಕಾಯ್ದೆಯಡಿಯಲ್ಲಿ ಕಲಂ 13(1)ರಂತೆ ಕ್ರಮ | ಕರ್ನಾಟಕ ರಾಜ್ಯ ಪತ್ರದಲ್ಲಿ ದಿ: 5.6.08 ರಂದು ಪ್ರಕಟಿಸಿದೆ. |
| 5 | 2001 ಜನಗಣತಿಯಂತೆ ಸದರಿ ಪಟ್ಟಣದ ಜನಸಂಖ್ಯೆ | 43.225 |

| | | |
|---|---|---|
| 6 | 2021ಕ್ಕೆ ಪ್ರಸ್ತಾಪಿಸಲಾದ ಜನಸಂಖ್ಯೆ | 72,000 |
| 7 | ಪ್ರತಿ 10 ವರ್ಷಕ್ಕೊಮ್ಮೆ ಜನಸಂಖ್ಯೆ: ಹೆಚ್ಚಳ ಪ್ರಮಾಣ | 27.44% (1991–2001) |
| 8 | ಪ್ರತಿ ಹೆಕ್ಟೇರಿಗೆ ಪರಿಗಣಿಸಲಾದ ಜನಸಾಂಧ್ರತೆ | 100 ಪಿಪಿಹೆಚ್ |
| 9 | ಅಭಿವೃದ್ಧಿ ಹೊಂದಿರುವ ಒಟ್ಟು ಪ್ರದೇಶ | 330 ಹೆಕ್ಟೇರ್ |
| 10 | ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಲಾದ ಒಟ್ಟು ವಿಸ್ತೀರ್ಣ | 725 ಹೆಕ್ಟೇರ್ |
| 11 | ಸರ್ಕಾರದಿಂದ ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆಗೊಂಡಿರುವ ಬಗ್ಗೆ ವಿವರಗಳು | ಸಂಖ್ಯೆ:ನಅಇ 224 ಟಿಟಿಪಿ 99 ದಿ: 12.5.2000 |
| 12 | ವರದಿಯಲ್ಲಿ ಈ ಕೆಳಕಂಡ ಅಂಶಗಳ ಬಗ್ಗೆ ಮಾಹಿತಿಯನ್ನು ಅಳವಡಿಸಲಾಗಿದೆ.<br>ಅ) ಘನ ತ್ಯಾಜ್ಯ ವಸ್ತುಗಳ ನಿವೇಶನ ಗುರ್ತಿಸುವ ಕುರಿತು (Solid waste management and Sewage treatment plant)<br>ಆ) ಭೂ ಕಂಪದ ಕುರಿತು (Safe measure against earth quake)<br>ಇ) ಅಂಗವಿಕಲರಿಗೆ ಸೌಲಭ್ಯಗಳನ್ನು ಒದಗಿಸುವ ಕುರಿತು (facility for physically Handicapped)<br>ಈ) ಮಳೆ ನೀರು ಸಂಗ್ರಹಣೆ ಕುರಿತು (Rain water Harvesting)<br>ಉ) ಸೂರ್ಯಕಿರಣಗಳಿಂದ ನೀರು ಕಾಯಿಸುವ ಕುರಿತು (solar water heater)<br>ಊ) ಏಕ ನಿವೇಶನದ ನಿಯಮಾವಳಿಗಳನ್ನು ಅಳವಡಿಸಿದೆ.<br>ಋ) ಐ.ಡಿ.ಎಸ್.ಎಂ.ಟಿ.ಯ ಯೋಜನೆಯ ವಿವರಗಳು | ಇಲ್ಲ<br>ಅಳವಡಿಸಿದೆ<br><br>ಅಳವಡಿಸಿದೆ<br>ಅಳವಡಿಸಿದೆ<br>ಅಳವಡಿಸಿದೆ<br><br>ಅಳವಡಿಸಿದೆ<br>– |

| 12 | | ಭೂ ಬಳಕೆ ವಿವರಗಳು (ನಕ್ಷೆಗಳನ್ನು ಲಗತ್ತಿಸಿದೆ) | ಹಾಲಿ ಭೂ ಬಳಕೆ 2007 (ಹೆಕ್ಟೇರ್‌ಗಳಲ್ಲಿ) | | ಉದ್ದೇಶಿತ ಭೂ ಬಳಕೆ 2021 (ಹೆಕ್ಟೇರ್‌ಗಳಲ್ಲಿ) | |
|---|---|---|---|---|---|---|
| | ಕ್ರ.ಸಂ. | ಭೂ ಉಪಯೋಗ | ವಿಸ್ತೀರ್ಣ ಹೆ | % | ವಿಸ್ತೀರ್ಣ ಹೆ | % |
| | 1 | ವಸತಿ | 123 | 40.26 | 379.62 | 53.16 |
| | 2 | ವಾಣಿಜ್ಯ | 25.80 | 08.44 | 34.00 | 4.76 |
| | 3 | ಕೈಗಾರಿಕೆ | 20.25 | 06.62 | 22.23 | 3.11 |
| | 4 | ಸಾರ್ವಜನಿಕ/ಅರೆ ಸಾರ್ವಜನಿಕ | 41.35 | 13.45 | 80.54 | 11.28 |
| | 5 | ಉದ್ಯಾನವನ/ಆಟದಮೈದಾನ/ಬಯಲು ಪ್ರದೇಶ | 05.85 | 01.91 | 35.11 | 4.92 |
| | 6 | ನಾಗರೀಕ ಸೌಲಭ್ಯ | 03.60 | 01.17 | 4.40 | 0.61 |
| | 7 | ಸಾರಿಗೆ ಮತ್ತು ಸಂಚಾರ | 85.60 | 28.06 | 158.22 | 22.16 |
| | | ಒಟ್ಟು | 305.45 | 100.00 | 714.12 | 100.00 |
| | | | 13.55 | – | – | – |
| | 8 | ಜಲಾವೃತ ಪ್ರದೇಶ | 10.88 | – | 10.88 | – |
| | | | – | – | – | – |
| | | ಒಟ್ಟು | 329.88 | 100.00 | 725.00 | 100.00 |

ಎಂ.ಎಂ. ಹಿರೇಮಠ
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 2271

## WATER RESOURCES SECRETARIAT

Sub: According Administrative Approval to the Minor Irrigation Projects under Accelerated Irrigation Benefit Programme-Regarding.

Read: Letter No. CE/MI(N)Zone/BJP/AE-5/2010-11/4627, dated: 12-08-2010 from Chief Engineer, Minor Irrgation North Zone, Bijapur.

**Preamble:**

As per the modified guidelines issued by the Government of India. Minor Irrigation schemes with potential more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka state is classified as one of the non-special category states. 81 taluks in the state are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of the central grant that will be 90% of the project cost. The balance cost of the project will have to be borne by the State as state's share.

Government of Karnataka has identified the new Minor Irrigation Schemes in these taluks to seek approval of Government of India under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation North Zone, Bijapur in the letter read above has requested for according administrative approval to the estimates of the works proposed under AIBP. Accordingly the following schemes in DPAP taluk are being considered for according administriative approval.

**Head of Account: 4702-00-101-1-10-139 AIBP Major Works**

Rs. In lakhs

| Sl No. | Name of Project | District | Taluka | Estimated cost | Potential planned (in Ha.) | Cost/Ha (Rs. in lakhs) |
|---|---|---|---|---|---|---|
| 1 | Construction of BCB across Doranala near Bharathanur village. | Gulbarga | Chittapur | 160.00 | 110.00 | 1.45 |
| 2 | Construction of LIS phase-II near Kowlur village | Yadgir | Shahpur | 262.00 | 405.00 | 0.65 |
| | Total | | | 422.00 | | |

**Government Order No.: SANEEYEE 236 MASAVI 2009 (6), Bangalore, Dated: 19-08-2010**

In view of the above, Administrative approval is hereby accorded for taking up the above works with an estimated cost totaling to Rs. 422.00 lakhs (Rupees Four hundred and twenty two lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt and State Govt.
4. The Central share is in the form of grant to the state.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O & M.

This order is issued with the concurrence of Finance Department in note No. PWD-890-FC-1/2009 dated 09.12.2009.

By Order and in the name of the Governor of Karnataka

**RUDRAMURTHY**

Ex Officio Under Secretary to Government

Water Resources Department (Minor Irrigation)

P.R. No. 2277

## WATER RESOURCES SECRETARIAT

Sub: According Administrative Approval to the Minor Irrigation Projects under Accelerated Irrigation Benefit Programme-Regarding.

Read: Letter No. CE/MI(N)Zone/BJP/AE-5/2010-11/4627, dated: 12-08-2010 from Chief Engineer, Minor Irrgation North Zone, Bijapur.

**Preamble:**

As per the modified guidelines issued by the Government of India. Minor Irrigation schemes with potential more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka state is classified as one of the non-special category states. 81 taluks in the state are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of the central grant that will be 90% of the project cost. The balance cost of the project will have to be borne by the State as state's share.

Government of Karnataka has identified the new Minor Irrigation Schemes in these taluks to seek approval of Government of India under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation North Zone, Bijapur in the letter read above has requested for according administrative approval to the estimates of the works proposed under AIBP. Accordingly the following schemes in DPAP taluk are being considered for according administrtative approval.

**Head of Account: 4702-00-101-1-10-139 AIBP Major Works**

Rs. In lakhs

| Sl No. | Name of Project | District | Taluka | Estimated cost | Potential planned (in Ha.) | Cost/Ha (Rs. in lakhs) |
|---|---|---|---|---|---|---|
| 01 | Construction of New Tank near Padasavalagi village. | Gulbarga | Aland | 445.00 | 225.00 | 1.97 |
| | Total | | | 445.00 | | |

**Government Order No.: SANEEYEE 236 MASAVI 2009 (7), Bangalore, Dated: 19-08-2010**

In view of the above, Administrative approval is hereby accorded for taking up the above works with an estimated cost of Rs. 445.00 lakhs (Rupees Four hundred and fourty five lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt and State Govt.
4. The Central share is in the form of grant to the state.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall Adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O & M.

This order is issued with the concurrence of Finance Department in note No. PWD-890-FC-1/2009 dated 09.12.2009.

By Order and in the name of the Governor of Karnataka

**RUDRAMURTHY**

Ex Officio Under Secretary to Government

Water Resources Department (Minor Irrigation)

P.R. No. 2278

## WATER RESOURCES SECRETARIAT

Sub: According Administrative Approval to the Minor Irrigation Projects under Accelerated Irrigation Benefit Programme-Regarding.

Read: Letter No. CE/MI(N)Zone/BJP/AE-6/2010-11/4647, dated: 13-08-2010 from Chief Engineer, Minor Irrgation North Zone, Bijapur.

**Preamble:**

As per the modified guidelines issued by the Government of India. Minor Irrigation schemes with potential more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka state is classified as one of the non-special category states. 81 taluks in the state are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of the central grant that will be 90% of the project cost. The balance cost of the project will have to be borne by the State as state's share.

Government of Karnataka has identified the new Minor Irrigation Schemes in these taluks to seek approval of Government of India under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation North Zone, Bijapur in the letter read above has requested for according administrative approval to the estimates of the works proposed under AIBP. Accordingly the following schemes in DPAP taluk are being considered for according administrtative approval.

**Head of Account: 4702-00-101-1-10-139 AIBP Major Works**

Rs. In lakhs

| Sl No. | Name of Project | District | Taluka | Estimated cost | Potential planned (in Ha.) | Cost/Ha (Rs. in lakhs) |
|---|---|---|---|---|---|---|
| 1 | Construction of Barrage near Udabala | Bidar | Humnabad | 60.00 | 58.00 | 1.03 |
| 2 | Construction of Barrage Near Bonthi village | Bidar | Aurad | 150.00 | 100.00 | 1.50 |
| 3 | Construction of Bridge cum Barrage near Ekalasapura wadi | Bidar | Balki | 230.00 | 119.00 | 1.93 |
| 4 | Construction of Anikut near Morambi village | Bidar | Balki | 60.00 | 50.00 | 1.20 |
| | Total | | | 500.00 | | |

**Government Order No. SANEEYEE 236 MASAVI 2009 (8), Bangalore, Dated: 19-08-2010**

In view of the above, Administrative approval is hereby accorded for taking up the above works with an estimated cost totaling to Rs. 500.00 lakhs (Rupees Five hundred lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt and State Govt.
4. The Central share is in the form of grant to the state.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O & M.

This order is issued with the concurrence of Finance Department in note No. PWD-890-FC-1/2009 dated 09.12.2009.

By Order and in the name of the Governor of Karnataka

**RUDRAMURTHY**

Ex Officio Under Secretary to Government

Water Resources Department (Minor Irrigation)

P.R. No. 2279

## WATER RESOURCES SECRETARIAT

Sub: According Administrative Approval to the Minor Irrigation Projects under Accelerated Irrigation Benefit Programme-Regarding.

Read: Letter No. CE/MI(N)Zone/BJP/AE-5/2010-11/4627, dated: 12-08-2010 from Chief Engineer, Minor Irrgation North Zone, Bijapur.

**Preamble:**

As per the modified guidelines issued by the Government of India. Minor Irrigation schemes with potential more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka state is classified as one of the non-special category states. 81 taluks in the state are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of the central grant that will be 90% of the project cost. The balance cost of the project will have to be borne by the State as state's share.

Government of Karnataka has identified the new Minor Irrigation Schemes in these taluks to seek approval of Government of India under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation North Zone, Bijapur in the letter read above has requested for according administrative approval to the estimakes of the works proposed under AIBP. Accordingly the following schemes in DPAP taluk are being considered for according administrtative approval.

**Head of Account: 4702-00-101-1-10-139 AIBP Major Works**

Rs. In lakhs

| Sl No. | Name of Project | District | Taluka | Estimated cost | Potential planned (in Ha.) | Cost/Ha (Rs. in lakhs) |
|---|---|---|---|---|---|---|
| 01 | Construction of New Tank across Belakolla nala near Kothanahipparaga village. | Gulbarga | Aland | 660.00 | 340.00 | 1.94 |
| | Total | | | 660.00 | | |

**Government Order No.: SANEEYEE 236 MASAVI 2009 (9), Bangalore, Dated : 19-08-2010**

In view of the above, Administrative approval is hereby accorded for taking up the above works with an estimated cost totaling to Rs. 660.00 lakhs (Rupees Six hundred sixty lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt and State Govt.
4. The Central share is in the form of grant to the state.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O & M.

This order is issued with the concurrence of Finance Department in note No. PWD-890-FC-1/2009 dated 09.12.2009.

By Order and in the name of the Governor of Karnataka

RUDRAMURTHY

Ex Officio Under Secretary to Government

Water Resources Department

(Minor Irrigation)

P.R. No. 2280

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಸಿಐ 284 ಎಸ್‌ಜಿಎಫ್ 2005, ಬೆಂಗಳೂರು ದಿನಾಂಕ : 24–08–2010**

**ವಿಷಯ :** ಮೆ : ಗಂಗಾವತಿ ಸಕ್ಕರೆ ಕಾರ್ಖಾನೆ (ನಿ) ಗಂಗಾವತಿ, ಕೊಪ್ಪಳ ಜಿಲ್ಲೆ–ಮುಚ್ಚಲಾಗಿರುವ ಈ ಕಾರ್ಖಾನೆಯ ಕಾರ್ಮಿಕರಿಗೆ ಬಾಕಿ ಇರುವ ವೇತನ ಮತ್ತು ಇತರೆ ಭತ್ಯೆಗಳನ್ನು KSIIDC ಮೂಲಕ ಪಾವತಿಸುವ ಸಲುವಾಗಿ KSIIDC ಗೆ ಸಾಲವಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

ಸರ್ಕಾರದ ಆದೇಶ ಸಂಖ್ಯೆ ಸಿಐ 284 ಎಸ್‌ಜಿಎಫ್ 2005 ದಿನಾಂಕ : 26–03–2010ರಲ್ಲಿನ ಅದೇಶ ಭಾಗದ 3ನೇ ಪ್ಯಾರಾದಲ್ಲಿರುವ ಲೆಕ್ಕ ಶೀರ್ಷಿಕೆ 6860–04–190–1–03 (ಯೋಜನೇತರ) 394 ಸಾಲಗಳು ಎಂಬುದರ ಬದಲಿಗೆ **ಲೆಕ್ಕ ಶೀರ್ಷಿಕೆ "6885–01–190–2–00 (ಯೋಜನೇತರ)** 394 ಸಾಲಗಳು**"** ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದ್ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 2281

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಪ್ರಾಯೋಗಿಕವಾಗಿ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಬಿಪಿಎಲ್ ಸೆನ್ಸಸ್–2010) ನಡೆಸಲು ರಾಜ್ಯದ 15 ಜಿಲ್ಲಾ ಪಂಚಾಯತಿಗಳಿಗೆ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಕ್ಯೂ/16025/8/2006/ಎ1(ಆರ್‌ಡಿ) (ಪಿಟಿ) ದಿನಾಂಕ 31–03–2010.
2. ಸರ್ಕಾರದ ಪತ್ರದ ಸಮಸಂಖ್ಯೆ ದಿನಾಂಕ 06–08–2010.

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಷ್ಟ್ರಾದ್ಯಂತ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಬಿಪಿಎಲ್ ಸೆನ್ಸಸ್–2010) ನಡೆಸಲು ಉದ್ದೇಶಿಸಿದೆ. ಈ ಸಮೀಕ್ಷೆಯ ಪೂರ್ಣ ವೆಚ್ಚವನ್ನು ಕೇಂದ್ರ ಸರ್ಕಾರವೇ ಭರಿಸುವುದು. ಇದರಂತೆ, ರಾಜ್ಯದಲ್ಲಿಯೂ ಸಮೀಕ್ಷೆ ನಡೆಸಬೇಕಾಗಿರುವುದರಿಂದ, ಓದಲಾಗಿದೆ (1)ರ ಪತ್ರದಲ್ಲಿ ಕೇಂದ್ರ ಸರ್ಕಾರ ರಾಜ್ಯಕ್ಕೆ ಮೊದಲನೇ ಕಂತಿನ ಅನುದಾನವಾಗಿ ರೂ.6,20,62,000 ಗಳನ್ನು ಬಿಡುಗಡೆ ಮಾಡಿದೆ. ಓದಲಾಗಿದೆ (2) ರ ಸರ್ಕಾರದ ಪತ್ರದಲ್ಲಿ ರಾಜ್ಯದ ನಿಧಿಯಾಗಿ ರೂ.22,22,000 ಕಾಯ್ದಿರಿಸಿಕೊಂಡು, ಉಳಿದ ಅನುದಾನವನ್ನು 30 ಜಿಲ್ಲಾ ಪಂಚಾಯತಿಗಳಿಗೆ ವಿಂಗಡಣೆ ಮಾಡಿ ನಿಗದಿಪಡಿಸಿದೆ. ಇದರನ್ವಯ ರೂ.13,60,000 ಹಾಗೂ ರಾಜ್ಯದ ಪಾಲಿನ ನಿಧಿ ರೂ.22,22,000 ಸೇರಿ ಒಟ್ಟು ರೂ.35,82,000 ಗಳನ್ನು ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ ನಿಗದಿಪಡಿಸಿದೆ. ಕೇಂದ್ರ ಸರ್ಕಾರದ ಸೂಚನೆಯಂತೆ ರಾಜ್ಯದ 14 ಜಿಲ್ಲಾ ಪಂಚಾಯತಿಗಳ 14 ಗ್ರಾಮಗಳಲ್ಲಿ (ಚಿಕ್ಕಮಗಳೂರು ಜಿಲ್ಲೆಯ ಬುಯನಕೋಟೆ, ದಕ್ಷಿಣ ಕನ್ನಡ ಜಿಲ್ಲೆಯ ಸಸಿಹಿತ್ಲು, ದಾವಣಗೆರೆ ಜಿಲ್ಲೆಯ ಸಿದ್ದಾಪುರ, ಧಾರವಾಡ ಜಿಲ್ಲೆಯ ಕಟ್ನೂರ್, ಹಾಸನ ಜಿಲ್ಲೆಯ ನೀರಗುಂದ, ಹಾವೇರಿ ಜಿಲ್ಲೆಯ ಹೀರಂಜಿ, ಕೊಡಗು ಜಿಲ್ಲೆಯ ಕಟ್ಟೇಪುರ, ಕೋಲಾರ ಜಿಲ್ಲೆಯ ಚಿಂಚಂದಲಹಳ್ಳಿ, ಕೊಪ್ಪಳ ಜಿಲ್ಲೆಯ ಬೈರ್‌ನಾಯಕನಹಳ್ಳಿ, ಮೈಸೂರು ಜಿಲ್ಲೆಯ ರಂಗನಾಥಪುರ, ರಾಮನಗರ ಜಿಲ್ಲೆಯ ರಾಮಾಪುರ, ಶಿವಮೊಗ್ಗ ಜಿಲ್ಲೆಯ ಗಿನಿವಾಲ, ಉಡುಪಿ ಜಿಲ್ಲೆಯ ಇನ್ನಂಜೆ, ಉತ್ತರ ಕನ್ನಡ ಜಿಲ್ಲೆಯ ಬೆಂಗ್ಲೆ) ಪ್ರಾಯೋಗಿಕವಾಗಿ (ಪೈಲೆಟ್) ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಬಿಪಿಎಲ್ ಸೆನ್ಸಸ್–2010) ನಡೆಸಬೇಕಾಗಿದೆ. ರಾಜ್ಯದಲ್ಲಿ ಪ್ರಾಯೋಗಿಕ ಸರ್ವೆ ನಡೆಸಲು ಇನ್‌ಸ್ಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕನಾಮಿಕ್ ಛೇಂಜ್ (ಐಸಾಕ್), ಬೆಂಗಳೂರು ಸಂಸ್ಥೆಯನ್ನು ಏಜೆನ್ಸಿಯಾಗಿ ಗುರುತಿಸಲಾಗಿದೆ. ರಾಜ್ಯದ 14 ಗ್ರಾಮಗಳಲ್ಲಿ ಪ್ರಾಯೋಗಿಕವಾಗಿ (ಪೈಲೆಟ್) ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಬಿಪಿಎಲ್ ಸೆನ್ಸಸ್–2010) ನಡೆಸುವ ವೆಚ್ಚವನ್ನು ಭರಿಸುವ ಸಲುವಾಗಿ 14 ಜಿಲ್ಲಾ ಪಂಚಾಯತಿಗಳಿಗೆ ಹಾಗೂ ರಾಜ್ಯದ ನಿಧಿ ಕಾಯ್ದಿರಿಸಿದ ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ ಒಟ್ಟು ಅನುದಾನ ರೂ.3,14,62,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 10 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 21ನೇ ಆಗಸ್ಟ್, 2010**

ರಾಜ್ಯ ಸರ್ಕಾರವು, ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಬಿಪಿಎಲ್ ಸೆನ್ಸಸ್–2010) ಗಾಗಿ ಅನುಬಂಧದಲ್ಲಿ ತೋರಿಸಿರುವ ಜಿಲ್ಲಾ ಪಂಚಾಯತಿಗಳಿಗೆ ರೂ.3,14,62,000 ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

**ಷರತ್ತುಗಳು:**

- ಅನುದಾನವನ್ನು ಖಜಾನೆಯಿಂದ ಸೆಳೆದು ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಬಿಪಿಎಲ್ ಸೆನ್ಸಸ್–2010) ಗಾಗಿಯೇ ಪ್ರತ್ಯೇಕ ಬ್ಯಾಂಕ್ ಖಾತೆ ತೆರೆದು ಜಮೆ ಮಾಡತಕ್ಕದ್ದು.
- ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಬಿಪಿಎಲ್ ಸೆನ್ಸಸ್–2010) ಮಾರ್ಗಸೂಚಿಯಂತೆ ಅನುದಾನವನ್ನು ಉಪಯೋಗಿಸತಕ್ಕದ್ದು.
- ಈ ಅನುದಾನವನ್ನು ಬೇರೆ ಯಾವ ಉದ್ದೇಶಗಳಿಗೆ ಬಳಸದೆ, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಆಗಿಂದಾಗ್ಗೆ ನೀಡುವ ಸೂಚನೆಗಳನ್ವಯ ವೆಚ್ಚ ಮಾಡುವುದು.

- ಸಮೀಕ್ಷೆಗಾಗಿ ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿದ ರೂ.35,82,000 ಪೈಕಿ ರಾಜ್ಯದ ನಿಧಿಯಾಗಿ ರೂ.22,22,000 ಮತ್ತು ರೂ.13,60,000 ಜಿಲ್ಲಾ ಪಂಚಾಯತಿಗೆ ನಿಗದಿಪಡಿಸಿದೆ. ರಾಜ್ಯದ ಹಾಗೂ ಜಿಲ್ಲಾ ಪಂಚಾಯತಿಯ ಸಮೀಕ್ಷೆಯ ವೆಚ್ಚವನ್ನು ಪ್ರತ್ಯೇಕವಾಗಿ ನಿರ್ವಹಿಸುವುದು.
- ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2010–2011ನೇ (2501–01–198–6–01)" (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.
- ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.
- ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 188 ಪಿಬಿಎಸ್ 2010 ದಿನಾಂಕ 19–08–2010 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ.ಕೆ. ರಂಗಸ್ವಾಮಿ**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 10 ಎಸ್‌ಜಿವೈ 2010, ಬೆಂಗಳೂರು, ದಿನಾಂಕ: 21–08–2010ಕ್ಕೆ ಅನುಬಂಧ**

**(ರೂ.ಗಳಲ್ಲಿ)**

| ಕ್ರ.ಸ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ |
|---|---|---|---|---|
| 1 | 2 | 3 | 4 | 5 |
| 1 | ಬೆಂಗಳೂರು ನಗರ | 401 | 0100ZZ8001 | 35,82,000 |
| 2 | ಚಿಕ್ಕಮಗಳೂರು | 408 | 1800ZZ0017 | 23,80,000 |
| 3 | ದಕ್ಷಿಣ ಕನ್ನಡ | 409 | 1900ZZ0047 | 17,00,000 |
| 4 | ದಾವಣಗೆರೆ | 451 | 1700ZZ0002 | 20,40,000 |
| 5 | ಧಾರವಾಡ | 415 | 2500ZZ8798 | 17,00,000 |
| 6 | ಹಾಸನ | 410 | 1300ZZ0003 | 27,20,000 |
| 7 | ಹಾವೇರಿ | 463 | 2700ZZ0001 | 23,80,000 |
| 8 | ಕೊಡಗು | 411 | 1200ZZ0001 | 10,20,000 |
| 9 | ಕೋಲಾರ | 404 | 0700ZZ8002 | 17,00,000 |
| 10 | ಕೊಪ್ಪಳ | 466 | 1500ZZ0010 | 13,60,000 |
| 11 | ಮೈಸೂರು | 407 | 0900ZZ0001 | 23,80,000 |
| 12 | ರಾಮನಗರ | 452 | 0400ZZ0001 | 13,60,000 |
| 13 | ಶಿವಮೊಗ್ಗ | 405 | 1400ZZ0002 | 23,80,000 |
| 14 | ಉಡುಪಿ | 457 | 2000ZZ0001 | 10,20,000 |
| 15 | ಉತ್ತರ ಕನ್ನಡ | 416 | 3000ZZ0080 | 37,40,000 |
| | | | **ಒಟ್ಟು ರೂ.** | **3,14,62 ,000** |

**ಡಿ.ಕೆ. ರಂಗಸ್ವಾಮಿ**
ನಿರ್ದೇಶಕರು (ಸ್ವ.ಉ.ಕಾ.) ಹಾಗೂ ಪ.ನಿ.
ಸರ್ಕಾರದ ಅಪರ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 2295

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ತಾಲ್ಲೂಕು ಧನರ್ಗಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/2661, ದಿನಾಂಕ: 24–04–2010.

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಬಿಜಾಪುರ ತಾಲ್ಲೂಕು ಧನರ್ಗಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಅಗತ್ಯವಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡು ಪರಿಹಾರದ ಐತೀರ್ಪು ರಚಿಸಲು ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ರೂ.31,98,839–00 ಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ: 24–04–2010 ರ ಪತ್ರದಲ್ಲಿ ಕೋರಿದ್ದಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 42 ಭೂಸ್ವಾಹಾ 2000, ದಿನಾಂಕ:08–10–2001 ರಲ್ಲಿ ಸೂಚಿಸಿರುವಂತೆ ಭೂಸ್ವಾಧೀನ ಪ್ರಕ್ರಿಯೆಗಾಗಿ ಸಂಭವನೀಯ ವೆಚ್ಚದ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿದೆ.

ಮೇಲೆ ವಿವರಿಸಿರುವ ಎಲ್ಲಾ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 99 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 25ನೇ ಆಗಸ್ಟ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಬಿಜಾಪುರ ತಾಲ್ಲೂಕು ಧನರ್ಗಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಮುಂಗಡ ಹಣ ರೂ.31,98,839–00 ಗಳನ್ನು (ಮುವತ್ತೊಂದು ಲಕ್ಷದ ತೊಂಭತ್ತೆಂಟು ಸಾವಿರದ ಎಂಟು ನೂರ ಮುವತ್ತೊಂಭತ್ತು ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಅನುಮೋದನೆ ನೀಡಿದೆ.

ಕಾಮಗಾರಿಗೆ ಅಗತ್ಯವಿರುವ ಭೂಸ್ವಾಧೀನದ ವಿಸ್ತೀರ್ಣದ ಬಗ್ಗೆ ದೃಢೀಕರಿಸಿಕೊಂಡು ಅದಕ್ಕನುಗುಣವಾಗಿ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡುವುದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2296

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಯುತರಾದ ಬಿ. ಉಮೇಶ ಪಿ.ಸಿ. 8552 ಮತ್ತು ನರಸಪ್ಪ ಹೆಚ್.ಸಿ.–1950 ಮಡಿವಾಳ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಆಗ್ನೇಯ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: 27/ಡಿಇ/ಆರ್–7/ಡಿಸಿಪಿ/ಆವಿ/2007 ದಿನಾಂಕ 10–04–2008.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು, ಆಡಳಿತ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 33/ಅಪೀಲು/2008 ದಿನಾಂಕ 24–01–2009.
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 15–04–2009.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)13/2009–10 ದಿನಾಂಕ 28–05–2010.

**ಪ್ರಸ್ತಾವನೆ :**

ಶ್ರೀಯುತರಾದ ಬಿ. ಉಮೇಶ ಪಿ.ಸಿ. 8552 ಮತ್ತು ನರಸಪ್ಪ ಹೆಚ್.ಸಿ.–1950, ಇವರುಗಳು ಬೆಂಗಳೂರಿನ ಮಡಿವಾಳ ಪೊಲೀಸ್ ಠಾಣೆಯಲ್ಲಿ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ನಿರ್ವಹಿಸುತ್ತಿದ್ದಾಗ ಅಧಿಕಾರ ದುರುಪಯೋಗ ಮತ್ತು ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ನಿಮಗೆ ದಿನಾಂಕ 08–09–2007 ರಂದು ಚೀತಾ 141ರಲ್ಲಿ ಮಡಿವಾಳ ಪೊಲೀಸ್ ಠಾಣಾ ಸರಹದ್ದಿನ 3ನೇ ಮತ್ತು 6ನೇ ಬೀಟಿನಲ್ಲಿ ರಾತ್ರಿ ಗಸ್ತು ಕರ್ತವ್ಯಕ್ಕೆ ನೇಮಕಮಾಡಿ ನಿಮ್ಮ ಬೀಟುಗಳಲ್ಲಿರುವ ಬಾರ್ ಮತ್ತು ವೈನ್ ಶಾಪ್‌ಗಳನ್ನು ನಿಗದಿತ ಸಮಯದೊಳಗೆ ಮುಚ್ಚಿಸುವಂತೆ ಹಾಗೂ ಅವಧಿ ಮೀರಿ ಮದ್ಯಮಾರಾಟ ಮಾಡುವ ಬಾರ್ ಮತ್ತು ವೈನ್ ಸ್ಟೋರ್‌ಗಳ ಆಸಾಮಿಗಳ ವಿರುದ್ಧ ಕಾನೂನು ರೀತ್ಯ ಕ್ರಮಕೈಗೊಳ್ಳಲು ಸೂಚಿಸಲಾಗಿತ್ತು.

ಆದರೆ ದಿನಾಂಕ 8/9-09-2007ರ ರಾತ್ರಿ 12.00 ಗಂಟೆ ಸಮಯದಲ್ಲಿ ಮಡಿವಾಳ ಹೊಸೂರು ರಸ್ತೆಯಲ್ಲಿರುವ ಅಶ್ವಿನಿ ಬಾರ್ ಮತ್ತು ರೆಸ್ಟೋರೆಂಟ್‌ಗಳಲ್ಲಿ ಪರವಾನಿಗೆ ನಿಯಮ ಮೀರಿ ಸಾರ್ವಜನಿಕರಿಗೆ ಮದ್ಯವನ್ನು ಮಾರಾಟ ಮಾಡುತ್ತಿರುವುದಾಗಿ ಬಂದ ವರ್ತಮಾನದ ಮೇರೆಗೆ ಶ್ರೀ ಕಾಂತರಾಜು, ಪೊಲೀಸ್ ಇನ್ಸ್‌ಪೆಕ್ಟರ್ ಮಡಿವಾಳ ಪೊಲೀಸ್ ಠಾಣೆ ರವರು ಬಂದು ಹೊಸೂರು ಮುಖ್ಯ ರಸ್ತೆಯ ದಾರಿಯಲ್ಲಿ ಪರಿಶೀಲಿಸುವ ಸಮಯದಲ್ಲಿ ಚೀತಾ 141ರಲ್ಲಿ ಕರ್ತವ್ಯದಲ್ಲಿದ್ದ ಶ್ರೀ ನರಸಪ್ಪ ಹೆಚ್.ಸಿ.-1950 ಮತ್ತು ಶ್ರೀ ಉಮೇಶ ಪಿ.ಸಿ. 8552, ರವರುಗಳು ಸ್ಥಳಕ್ಕೆ ಬಂದು ಮದ್ಯ ಮಾರಾಟ ಮಾಡಲು ಅನುವು ಮಾಡಿಕೊಡುತ್ತಿದ್ದುದ್ದನ್ನು ಖುದ್ದಾಗಿ ವೀಕ್ಷಿಸಲಾಗಿದೆ. ನಿಮಗೆ ಚೀತಾ 141ರಲ್ಲಿ 3ನೇ ಮತ್ತು 6ನೇ ಬೀಟು ಗಸ್ತುಮಾಡಿ ಅವಧಿಗೆ ಸರಿಯಾಗಿ ಬಾರ್ ಮತ್ತು ವೈನ್ ಶಾಪ್‌ಗಳನ್ನು ಮುಚ್ಚಿಸಿ ಆಯಾ ಬಾರ್‌ಗಳ ಒಳಗೆ ಅಥವಾ ಹೊರಗಡೆ ಯಾವುದೇ ರೀತಿಯ ಮದ್ಯಪಾನ ಮಾರಾಟಕ್ಕೆ ಅವಕಾಶಮಾಡದಂತೆ ತಿಳುವಳಿಕೆಗಳನ್ನು ನೀಡಿದ್ದರೂ ಸಹ ನೀವು ಕಾರ್ಯೋನ್ಮುಖರಾಗದೆ ನಿಮ್ಮ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ಶಿಸ್ತು ಇಲಾಖೆಯಲ್ಲಿರುವ ನೀವು ಇಲಾಖೆಗೆ ಅಗೌರವ ತರುವಂತೆ ಮಾಡಿ ಇಲಾಖೆಗೆ ಕಳಂಕ ತಂದು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಆಗ್ನೇಯ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 10-04-2008ರ ಆದೇಶದಲ್ಲಿ ಅರ್ಜಿದಾರರುಗಳ ವಾರ್ಷಿಕ ವೇತನ ಬಡ್ತಿಯನ್ನು 3 ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡುವ ದಂಡನೆ ವಿಧಿಸಿರುತ್ತಾರೆ. ದಿನಾಂಕ 09-09-2007 ರಿಂದ 20-12-2007 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು, ಆಡಳಿತ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 24-01-2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರುಗಳು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಅದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 93 ಪೊಸಿಅ 2009, ಬೆಂಗಳೂರು, ದಿನಾಂಕ : 26ನೇ ಆಗಸ್ಟ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಯುತರಾದ ಬಿ. ಉಮೇಶ ಪಿ.ಸಿ. 8552 ಮತ್ತು ನರಸಪ್ಪ ಹೆಚ್.ಸಿ.-1950, ಮಡಿವಾಳ ಪೊಲೀಸ್ ಠಾಣೆ, ಬೆಂಗಳೂರು, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2297

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಹೆಚ್. ವಸಂತ, ಪಿ.ಎಸ್.ಐ., ನಾಗಮಂಗಲ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಮೈಸೂರು ನಗರ, ಇವರ ಆದೇಶ ಸಂಖ್ಯೆ: ಶಿಕ್ಷೆ/253/06-07, ಓ.ಬಿ: 160/2007-08 ದಿನಾಂಕ 15-06-2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು ಇವರ ಹಿಂಬರಹ ಸಂಖ್ಯೆ: ಅಪೀಲು(6)/45/2009-10 ದಿನಾಂಕ 24-09-2009.
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 06-11-2009.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)58/2009-10 ದಿನಾಂಕ 30-01-2010.

**ಪ್ರಸ್ತಾವನೆ :**

ಶ್ರೀ ಎಸ್.ಹೆಚ್. ವಸಂತ, ಪಿ.ಎಸ್.ಐ., ನಾಗಮಂಗಲ ಟೌನ್ ಪೊಲೀಸ್ ಠಾಣೆ, ಇವರು ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ಲೋಪವೆಸಗಿರುವ ಕಾರಣದ

ಮೇಲೆ ಇವರುಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಮೈಸೂರು ನಗರದ ಅಶೋಕಪುರಂ ಠಾಣೆಯಲ್ಲಿ ಪಿ.ಎಸ್.ಐ. (ಕಾನೂನು ಮತ್ತು ಸುವ್ಯವಸ್ಥೆ) ಆಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎಸ್.ಹೆಚ್. ವಸಂತ ರವರು ಕರ್ತವ್ಯದಲ್ಲಿ ತೀವ್ರ ಲೋಪವೆಸಗಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಮೈಸೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 15–06–2007ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ 2 ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲ್ಮನವಿಯನ್ನು ಸಕಾಲದಲ್ಲಿ ಸಲ್ಲಿಸದೇ ಇರುವ ಬಗ್ಗೆ ಯಾವುದೇ ಸಮಂಜಸವಾದ ಕಾರಣ ನೀಡಿರುವುದಿಲ್ಲವಾದ್ದರಿಂದ ವಿಳಂಬವಾಗಿ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲವೆಂದು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 24–09–2009ರಲ್ಲಿ ಹಿಂಬರಹವನ್ನು ನೀಡಿದ್ದಾರೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 194 ಪೊಸಿಅ 2009, ಬೆಂಗಳೂರು, ದಿನಾಂಕ : 26ನೇ ಆಗಸ್ಟ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಹೆಚ್. ವಸಂತ, ಪಿ.ಎಸ್.ಐ., ನಾಗಮಂಗಲ ಟೌನ್ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2298

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎನ್. ರಾಜಣ್ಣ ಹೆಚ್.ಸಿ.–616, ಕರ್ನಾಟಕ ರಾಜ್ಯ ಮಾಹಿತಿ ಹಕ್ಕು ಆಯೋಗ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಂಚಾರ ಪೂರ್ವ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ:ಇವಿ/27/ಆರ್7/ಡಿಸಿಪಿ/ಸಂ.ಪೂ/2007 ದಿನಾಂಕ 14–04–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, ಸಂಚಾರ, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 5/ಅಪೀಲು/ಅಪರ/ಸಿಪಿ/ಸಂ:2008 ದಿನಾಂಕ 02–04–2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 24–08–2009.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)38/2009–10 ದಿನಾಂಕ 24–05–2010.

**ಪ್ರಸ್ತಾವನೆ :**

ಶ್ರೀ ಎನ್. ರಾಜಣ್ಣ ಹೆಚ್.ಸಿ.–616 ಇವರು ಬೆಂಗಳೂರಿನ ಮಡಿವಾಳ ಸಂಚಾರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಬೇಜವಾಬ್ದಾರಿತನವನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಶ್ರೀ ಬಿ.ವಿ. ವೆಂಕಟೇಶ್, ಎ.ಎಸ್.ಐ. ಮತ್ತು ಹೆಚ್.ಸಿ. 616 ರಾಜಣ್ಣ, ಮಡಿವಾಳ ಸಂಚಾರ ಪೊಲೀಸ್ ಠಾಣೆ, ಆದ ನೀವುಗಳು ಪ್ರತಿ ಶುಕ್ರವಾರಗಳಂದು ನಡೆಯುವ ವಾರದ ಕವಾಯತಿಗೆ ಹಾಜರಾಗಲು ಸಲಹೆ/ಸೂಚನೆಯನ್ನು ನೀಡಿದ್ದರೂ ಸಹ ದಿನಾಂಕ 09–03–2007 ರಂದು ನಡೆದ ವಾರದ ಕವಾಯತಿಗೆ ಏಕಾಏಕಿ ಅನಧಿಕೃತವಾಗಿ ಗೈರುಹಾಜರಿಯಾಗಿ ಕರ್ತವ್ಯದಲ್ಲಿ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಂಚಾರ ಪೂರ್ವ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 14–04–2007ರ ಆದೇಶದಲ್ಲಿ ಅರ್ಜಿದಾರರ

ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮೂರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, ಸಂಚಾರ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 02–04–2009 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 158 ಪೊಸಿಅ 2009, ಬೆಂಗಳೂರು, ದಿನಾಂಕ : 26ನೇ ಆಗಸ್ಟ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್. ರಾಜಣ್ಣ ಹೆಚ್.ಸಿ.–616 ಕರ್ನಾಟಕ ರಾಜ್ಯ ಮಾಹಿತಿ ಹಕ್ಕು ಆಯೋಗ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2299 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಕಾರ್ಮಿಕ ಸಚಿವಾಲಯ

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳಿಗೆ ಮಂಜೂರಾತಿಯಾದ ವೇತನ ಭತ್ಯೆಯನ್ನು ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ವೈದ್ಯಾಧಿಕಾರಿಗಳಿಗೂ ವಿಸ್ತರಿಸಿ ಮಂಜೂರಾತಿ ಮಾಡುವ ಕುರಿತು.

**ಓದಲಾಗಿದೆ :** ನಿರ್ದೇಶಕರು, ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು, ಇವರ ಪತ್ರ ಸಂಖ್ಯೆ ಅಭಿವೃದ್ಧಿ/164/2009–10, ದಿನಾಂಕ : 23–12–2009 ಮತ್ತು 27–05–2010.

**ಪ್ರಸ್ತಾವನೆ :**

ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯರುಗಳ ವೇತನ ಭತ್ಯೆಯನ್ನು ಆ.ಕು.ಕ. ಇಲಾಖೆ/ವೈದ್ಯಕೀಯ ಶಿಕ್ಷಣ ಇಲಾಖೆಯ ವೈದ್ಯರುಗಳು ಪಡೆಯುವ ವೇತನ ಭತ್ಯೆಗೆ ಸರಿಸಮಾನವಾಗಿ ಹೆಚ್ಚಿಸುವಂತೆ ಕಾರಾವಿ ವೈದ್ಯಾಧಿಕಾರಿಗಳ ಸಂಘದವರು ದಿನಾಂಕ : 01–10–2009 ರ ಪತ್ರದಲ್ಲಿ ಕೋರಿರುತ್ತಾರೆಂದು ಅದರಂತೆ ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆ ಇವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿ ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿನ ವೈದ್ಯಾಧಿಕಾರಿಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳನ್ನು ಭರ್ತಿ ಮಾಡಿದಂತೆಯೇ ಕರ್ನಾಟಕ ಲೋಕ ಸೇವಾ ಆಯೋಗದ ಮೂಲಕ ಭರ್ತಿ ಮಾಡಲಾಗುತ್ತಿದ್ದು, ಆಯ್ಕೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ ಮತ್ತು ಮಾನದಂಡಗಳು ಒಂದೇ ಆಗಿರುತ್ತದೆಯೆಂದು ಕಾರಾವಿ ಇಲಾಖೆಯ ವೈದ್ಯಾಧಿಕಾರಿಗಳು ಆ.ಕು.ಕ. ಇಲಾಖೆಯ ವೈದ್ಯಾಧಿಕಾರಿಗಳ ವೇತನ ಶ್ರೇಣಿಗೆ ಸಮಾನಾಂತರವಾಗಿ ವೇತನ, ಭತ್ಯೆಗಳನ್ನು ಹಾಗೂ ಇತರೆ ಭತ್ಯೆಗಳನ್ನು ರಾಜ್ಯ ಸರ್ಕಾರದ 5ನೇ ವೇತನ ಆಯೋಗದ ಶಿಫಾರಸ್ಸಿನಂತೆ ಪಡೆಯುತ್ತಿರುವುದಾಗಿಯೂ ಅದರಂತೆ ಆ.ಕು.ಕ. ಇಲಾಖೆಯ ವೈದ್ಯಾಧಿಕಾರಿಗಳಿಗೆ ವಿಸ್ತರಿಸಲಾದ ಭತ್ಯೆಯನ್ನು ಕಾರಾವಿ ಇಲಾಖೆಯ ವೈದ್ಯಾಧಿಕಾರಿಗಳಿಗೂ ವಿಸ್ತರಿಸುವಂತೆ ಕೋರಿರುತ್ತಾರೆ.

ಸರ್ಕಾರದ ಆದೇಶ ಸಂಖ್ಯೆ : ಆಕುಕ 718 ಹೆಚ್ ಎಸ್ ಹೆಚ್ 2008, ದಿನಾಂಕ : 10–12–2009 ರ ಮೂಲಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವಿವಿಧ ವೃಂದದ ವೈದ್ಯಾಧಿಕಾರಿಗಳಿಗೆ ಹಾಗೂ ದಂತ ಆರೋಗ್ಯಾಧಿಕಾರಿಗಳಿಗೆ ಈ ಕೆಳಕಂಡಂತೆ ವಿವಿಧ ಭತ್ಯೆಗಳನ್ನು ಮಂಜೂರು ಮಾಡಲಾಗಿದೆ.

1. ವೈದ್ಯರು ಗ್ರಾಮೀಣ ಪ್ರದೇಶದ ಕೇಂದ್ರ ಸ್ಥಾನದಲ್ಲಿ ವಾಸಿಸುವುದು ಕಡ್ಡಾಯವೆಂಬ ಷರತ್ತಿಗೆ ಒಳಪಟ್ಟು ಮಾಸಿಕ ರೂ. 7,000/– ಗ್ರಾಮೀಣ ಭತ್ಯೆ.
2. ಡಿಪ್ಲೊಮೋ ಪಡೆದ ವೈದ್ಯರುಗಳಿಗೆ ಮಾಸಿಕ ರೂ. 6,000/– ಹಾಗೂ ಸ್ನಾತಕೋತ್ತರ ಪದವಿ ಪಡೆದ ವೈದ್ಯರುಗಳಿಗೆ ಮಾಸಿಕ ರೂ. 8,000/– ಸ್ನಾತಕೋತ್ತರ ಭತ್ಯೆ.
3. ವಿವಿಧ ವೃಂದಗಳ ಎಲ್ಲಾ ವೈದ್ಯರುಗಳಿಗೆ ಮಾಸಿಕ ರೂ. 3,000/– (Risk Allowance)
4. ಸೂಪರ್ ಸ್ಪೆಷಾಲಿಟಿ ಹೊಂದಿರುವ ತಜ್ಞ ವೈದ್ಯರುಗಳಿಗೆ ಮಾಸಿಕ ರೂ. 10,000/– ಸೂಪರ್ ಸ್ಪೆಷಾಲಿಟಿ ಭತ್ಯೆ.

ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ವೈದ್ಯಾಧಿಕಾರಿಗಳು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳಿಗೆ ಸಮಾನವಾಗಿ ಕಾರ್ಯನಿರ್ವಹಿಸುತ್ತಿರುವ ಕಾರಣ, ಈ ಮೇಲಿನ ಸೌಲಭ್ಯಗಳನ್ನು ಈ ಇಲಾಖೆಯ ವೈದ್ಯಾಧಿಕಾರಿಗಳಿಗೆ ವಿಸ್ತರಿಸಲು ಉದ್ದೇಶಿಸಿ, ಕಾರಾವಿ ನಿಗಮದ ಸಹಮತಿಯನ್ನು ಕೋರಲಾಯಿತು. ಕಾರಾವಿ ನಿಗಮವು ವಿಮಾದಾರರಿಗೆ ವೈದ್ಯಕೀಯ ಸೌಲಭ್ಯ ವಿಸ್ತರಿಸಲು ಉಂಟಾದ

ಒಟ್ಟು ವೆಚ್ಚದಲ್ಲಿ 7/8 ಭಾಗವನ್ನು ಹಾಗೂ 1/8 ಭಾಗವನ್ನು ರಾಜ್ಯ ಸರ್ಕಾರವು ನಿಗಮದ ಮಿತಿಗೆಗೆ ಒಳಪಟ್ಟಂತೆ ಭರಿಸಬೇಕಾಗುತ್ತದೆಯೆಂದು, ಕಾರಾವಿ ನಿಗಮದ ಮಿತಿಗಿಂತ ಹೆಚ್ಚುವರಿ ವೆಚ್ಚ ಉಂಟಾದಲ್ಲಿ, ಅಂತಹ ಹೆಚ್ಚುವರಿ ವೆಚ್ಚವನ್ನು ರಾಜ್ಯ ಸರ್ಕಾರವೇ ಭರಿಸಬೇಕಾಗುತ್ತದೆಯೆಂದು ತಿಳಿಸಿರುತ್ತದೆ.

ಪ್ರಸಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 370 ಎಲ್‌ಎಸ್‌ಐ 2009, ಬೆಂಗಳೂರು, ದಿನಾಂಕ: 01–10–2010**

ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ವಿವಿಧ ವೃಂದದ ವೈದ್ಯಾಧಿಕಾರಿಗಳಿಗೆ ಈ ಕೆಳಕಂಡ ಭತ್ಯೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮಂಜೂರು ಮಾಡಲಾಗಿದೆ.

1. ವಿವಿಧ ವೃಂದದ ಎಲ್ಲಾ ವೈದ್ಯರಿಗೆ ಮಾಸಿಕ ರೂ. 3,000/– ರಂತೆ ತುರ್ತು ಚಿಕಿತ್ಸಾ ಭತ್ಯೆ.
2. ಡಿಪ್ಲೊಮೋ ಪಡೆದ ವೈದ್ಯರಿಗೆ ಮಾಸಿಕ ರೂ. 6,000/– ಹಾಗೂ ಸ್ನಾತಕೋತ್ತರ ಪದವಿ ಪಡೆದ ವೈದ್ಯರಿಗೆ ಮಾಸಿಕ ರೂ. 8,000/–
3. ಸೂಪರ್ ಸ್ಪೆಷಾಲಿಟಿ ಹೊಂದಿದ ತಜ್ಞ ವೈದ್ಯರಿಗೆ ಮಾಸಿಕ ರೂ. 10,000/–

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಆಇ 389 ವೆಚ್ಚ 9–10, ದಿನಾಂಕ: 12–08–2010 ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದಸ್ವಾಮಿ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

ಪಿ.ಆರ್.2574

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದೋಲೆ

ಸಂಖ್ಯೆ : ಕಸಂವಾಪ್ರ 30 ಸ್ಮಾಪ್ರನಿ 2010, ಬೆಂಗಳೂರು ದಿನಾಂಕ 27–08–2010

ದಿನಾಂಕ : 20–07–2010 ರ ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 30 ಸ್ಮಾಪ್ರನಿ 2010 ರ ಆದೇಶ ಭಾಗದಲ್ಲಿ "ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ಇವರಿಗೆ ಬಿಡುಗಡೆ ಮಾಡಿದೆ" ಎಂಬುದಕ್ಕೆ ಬದಲಾಗಿ "ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರದ ಮಂಜೂರಾತಿ ನೀಡಿದೆ" ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

ಪಿ.ಆರ್. 2314

## ಒಳಾಡಳಿತ ಸಚಿವಾಲಯ

### ಸೇರ್ಪಡೆ

ಸಂಖ್ಯೆ : ಒಇ 213 ಪಿಪಿಇ 2010, ಬೆಂಗಳೂರು ದಿನಾಂಕ 25–08–2010

ಸರ್ಕಾರದ ಆದೇಶ ಸಂಖ್ಯೆ: ಒಎ 361 ಪಿಪಿಇ 2009, ದಿನಾಂಕ : 23–10–2009 ರಲ್ಲಿ ವೇತನ, ಸೇವಾ ಷರತ್ತು ಮತ್ತು ನಿಬಂಧನೆಗಳ ಕ್ರಮ ಸಂಖ್ಯೆ 19 ರಲ್ಲಿ "ಸದರಿಯವರ ವೇತನವನ್ನು 2014–ನ್ಯಾಯ ಪರಿಪಾಲನೆ–114 ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ–002 ಅಧಿಕಾರಿಗಳ ವೇತನ ಈ ಲೆಕ್ಕಶೀರ್ಷಿಕೆಯಡಿ ಭರಿಸತಕ್ಕದ್ದು" ಎಂಬುದರ ಜೊತೆಗೆ "ಒಳಾಡಳಿತ ಇಲಾಖೆಯ ವ್ಯಾಪ್ತಿಯಲ್ಲಿ ಬರುವ 30 ತ್ವರಿತ ವಿಲೇವಾರಿ ನ್ಯಾಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಅಭಿಯೋಜಕರುಗಳಿಗೆ ಸಂಬಂಧಿಸಿದಂತೆ ಸದರಿಯವರ ವೇತನವನ್ನು 2014–0–800–1–00 EFC. GRANTS FOR UPGRADATION OF JUDICAL ADMINISTRATION-101-GRANT-IN-AID ಈ ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು" ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಹಾಗೂ ಅಭಿಯೋಗಗಳು)

ಪಿ.ಆರ್. 2354

## ನಗರಾಭಿವೃದ್ಧಿ ಸಚಿವಾಲಯ

**ಸೇರ್ಪಡೆ ಆದೇಶ**

ಸಂಖ್ಯೆ : ನಅಇ 531 ಬೆಂಭೂಸ್ವಾ 2010, ಬೆಂಗಳೂರು ದಿನಾಂಕ 31–08–2010

ಸರ್ಕಾರದ ಆದೇಶ ಸಂಖ್ಯೆ: ನಅಇ 427 ಬೆಂಭೂಸ್ವಾ 2007, ದಿನಾಂಕ : 02–04–2008 ರ ಆದೇಶದ ಭಾಗದಲ್ಲಿ ಕಂಡಿಕೆ 4 ರ ಅಂತ್ಯದ 9 ನೇ ಸಾಲಿನ ಕೊನೆಯಲ್ಲಿ ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

"ಭಾಗಶಃ ಪರಿಹಾರ ಧನ ಪಡೆದಾಗ ಪ್ರೋತ್ಸಾಹದಾಯಕ ಯೋಜನೆ ಅಡಿಯಲ್ಲಿ ನಿವೇಶನ ಪಡೆಯಲು ಅರ್ಹರಿರುವುದಿಲ್ಲ"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಪ್ರೇಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

ಪಿ.ಆರ್. 2355

## URBAN DEVELOPMENT SECRETARIAT

**CORRIGENDUM**

**No. UDD 191 BMR 2010 BANGALORE, DATED 18-08-2010**

In Government Order No. UDD 191 BMR 2010, dated 9-7-2010 and Corrigendum dated 6-8-2010 at serial no. 5 against Commissioner of Police, Mysore, the word **"Convenor"** may be read as **"Member".**

By Order and in the name of the Governor of Karnataka

**M.S. PREMACHANDRA**

Under Secretary to Government,

Urban Development Department

P.R. 2356

## ಶಿಕ್ಷಣ ಸಚಿವಾಲಯ

**ವಿಷಯ :** 13ನೇ ಹಣಕಾಸು ಆಯೋಗದಿಂದ ಪ್ರಾಥಮಿಕ ಶಿಕ್ಷಣಕ್ಕಾಗಿ ಸರ್ವ ಶಿಕ್ಷಣ ಅಭಿಯಾನ ಯೋಜನೆ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. 13ನೇ ಹಣಕಾಸು ಆಯೋಗದ ಶಿಫಾರಸ್ಸುಗಳು.
2. ವಿತ್ತ ಮಂತ್ರಾಲಯದ ಪತ್ರ ಸಂಖ್ಯೆ ಎಫ್.ಡಿ. 7(1)/ಎಫ್.ಸಿ.ಡಿ./2010 ದಿನಾಂಕ: 30–06–2010.
3. ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ: ಆ.ಇ.:26:ಆಆಕೋ 2010, ದಿನಾಂಕ: 19–07–2010.
4. ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನರವರ ಪತ್ರ ಸಂಖ್ಯೆ ಸ.ಶಿ.ಅ/ ಮು.ಲೆ.ಅ/7300/ಆಅ/10–11 ದಿನಾಂಕ: 13–07–2010.

**ಪ್ರಸ್ತಾವನೆ :**

1. ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ ಓದಲಾದ (1)ರ ಶಿಫಾರಸ್ಸಿನಲ್ಲಿ 13ನೇ ಹಣಕಾಸು ಆಯೋಗವು ಕರ್ನಾಟಕಕ್ಕೆ ಪ್ರಾಥಮಿಕ ಶಿಕ್ಷಣಕ್ಕಾಗಿ 2010–11 ರಿಂದ 2014–15 ರವರೆಗೆ ಒಟ್ಟಾರೆ 667.00 ಕೋಟಿ ರೂಪಾಯಿಗಳನ್ನು ಒದಗಿಸುವಂತೆ ಶಿಫಾರಸ್ಸು ಮಾಡಿರುತ್ತದೆ.
2. ಮೇಲೆ ಓದಲಾದ (2)ರ ಪತ್ರದಲ್ಲಿ ಆರ್ಥಿಕ ಆಯೋಗವು 2010–11ನೇ ಸಾಲಿಗೆ 104.00 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿರುತ್ತದೆ.
3. ಇದನ್ನು ಅನುಸರಿಸಿ ಮೇಲೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು, 13ನೇ ಹಣಕಾಸು ಆಯೋಗವು ಬಿಡುಗಡೆ ಮಾಡಲಾದ 104.00 ಕೋಟಿ ರೂಪಾಯಿಗಳನ್ನು ಸರ್ವ ಶಿಕ್ಷಣ ಅಭಿಯಾನ ಯೋಜನೆಯಂತೆ ಲೆಕ್ಕಶೀರ್ಷಿಕೆ 2202–01–800–1–53 ಪ್ರಾಥಮಿಕ ಶಿಕ್ಷಣಕ್ಕಾಗಿ 13ನೇ ಹಣಕಾಸು ಆಯೋಗ ಸಹಾಯಾನುದಾನ (ಸ.ಶಿ.ಅ (ಯೋಜನೇತರ) ದಡಿ ವೆಚ್ಚ ಮಾಡುವಂತೆ ಬಿಡುಗಡೆ ಮಾಡಿರುತ್ತದೆ.
4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನರವರು 13ನೇ ಹಣಕಾಸು ಆಯೋಗವು 2010–11ನೇ ಸಾಲಿಗೆ ಸರ್ವ ಶಿಕ್ಷಣ ಅಭಿಯಾನ ಕಾರ್ಯಕ್ರಮ ಅನುಷ್ಠಾನಕ್ಕೆ ಒದಗಿಸಿರುವ 104.00 ಕೋಟಿ ರೂ.ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.
5. ಸದರಿ ಪ್ರಸ್ತಾವನೆ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 170 ಎಂ.ಸಿ.ಡಿ 2010, ಬೆಂಗಳೂರು ದಿನಾಂಕ: 23–08–2010.**

6. ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕೇಂದ್ರ ಸರ್ಕಾರದ ಸೂಚನೆಯನ್ವಯ ಸರ್ವ ಶಿಕ್ಷಣ ಅಭಿಯಾನ ಕಾರ್ಯಕ್ರಮ ಅನುಷ್ಠಾನಕ್ಕಾಗಿ 2010–11ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–01–800–1–53 ಪ್ರಾಥಮಿಕ ಶಿಕ್ಷಣಕ್ಕಾಗಿ 13ನೇ ಹಣಕಾಸು ಆಯೋಗ ಸಹಾಯಾನುದಾನ [ಸ.ಶಿ.ಅ (ಯೋಜನೇತರ ದಡಿ 104.00 ಕೋಟಿ ರೂಪಾಯಿಗಳನ್ನು [ಒಂದು ನೂರಾ ನಾಲ್ಕು ಕೋಟಿ ರೂಪಾಯಿಗಳು ಮಾತ್ರ] ವೆಚ್ಚ ಮಾಡಲು ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನರವರಿಗೆ ಬಿಡುಗಡೆ ಮಾಡಲಾಗಿದೆ.
7. ಉದ್ದೇಶಿತ ಹಣವನ್ನು ಸರ್ವ ಶಿಕ್ಷಣ ಅಭಿಯಾನ ಯೋಜನೆಯ ಅನುಮೋದಿತ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಹಾಗೂ ತ್ರೈಮಾಸಿಕ ಬಳಕೆ ಪ್ರಮಾಣ ಪತ್ರವನ್ನು ಕಾಲ ಕಾಲಕ್ಕೆ ನೀಡುವ ಷರತ್ತನ್ನು ವಿಧಿಸಿರುತ್ತದೆ.
8. ಈ ಆದೇಶವನ್ನು ಆರ್ಥಿಕ ಇಲಾಖೆಯು ಕ್ರೆಡಿಟ್ ಕನ್‌ಫರ್‌ಮೇಷನ್ ಸ್ಲಿಪ್ ಸಂಖ್ಯೆ ಎಫ್‌ಡಿ: 13 : ಬಿ.ಜಿ.ಎಲ್.: 2009, ದಿನಾಂಕ: 06–07–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2310

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಪೂರ್ಣ ಪ್ರಮಾಣದ "ನೋಡಲ್ ಏಜೆನ್ಸಿ"ಯಾಗಿ ಕರ್ತವ್ಯ ನಿರ್ವಹಿಸಲು ಕೇಂದ್ರ ಕಛೇರಿಯಲ್ಲಿ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ಹೊಸದಾಗಿ ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಪಿಡಿ 176 ಪಿಎಸ್‌ಟಿ 82 ದಿನಾಂಕ: 10–11–1982.
2. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರ ಪತ್ರ ಸಂಖ್ಯೆ: ಆಸಾಂನಿ 68 ಸಿಪಿಸಿ (ಐಎಸ್‌ಎಸ್‌ಪಿ) 2009 ದಿನಾಂಕ: 11–01–2010.
3. ಸರ್ಕಾರದ ಆದೇಶ ಸಂಖ್ಯೆ: ಪಿಡಿ 42 ಎಸ್‌ಎಂಸಿ 2009 ದಿನಾಂಕ: 11–08–2010.

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯದ ಎಲ್ಲಾ ಸಾಂಖ್ಯಿಕ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವನ್ನು "ನೋಡಲ್ ಏಜೆನ್ಸಿ"ಯನ್ನಾಗಿ ಘೋಷಿಸಲಾಗಿದೆ. ಆದರೆ, ಸದರಿ ನಿರ್ದೇಶನಾಲಯದಲ್ಲಿನ ಸಿಬ್ಬಂದಿಯ ಕೊರತೆಯಿಂದಾಗಿ ಮತ್ತು ಪ್ರಾತಿನಿಧ್ಯತೆಯನ್ನು ಅನುಲಕ್ಷಿಸಿ ಈ ನಿರ್ದೇಶನಾಲಯವು "ನೋಡೆಲ್ ಏಜೆನ್ಸಿ"ಯಾಗಿ ಯಾವ ಮಟ್ಟದಲ್ಲಿ ಕಾರ್ಯ ನಿರ್ವಹಿಸಬೇಕಿತ್ತೋ ಅಂತಹ ನಿರೀಕ್ಷಿತ ಮಟ್ಟದಲ್ಲಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿಲ್ಲವೆಂಬ ಅಂಶವನ್ನು ಮನಗಂಡು ಈ ಬಗ್ಗೆ ಪರಾಮರ್ಶಿಸಿದ ನಂತರ ರಾಜ್ಯದ ಸಾಂಖ್ಯಿಕ ವ್ಯವಸ್ಥೆಯನ್ನು ಸದೃಢಗೊಳಿಸಲು ಕರ್ನಾಟಕ ರಾಜ್ಯ ಕಾರ್ಯತಾಂತ್ರಿಕ ಯೋಜನೆಯನ್ನು ತಯಾರಿಸಲಾಗಿದೆ. ಸದರಿ ಯೋಜನೆಯಲ್ಲಿ ಈ ನಿರ್ದೇಶನಾಲಯವು ಪೂರ್ಣ ಪ್ರಮಾಣದ "ನೋಡಲ್ ಏಜೆನ್ಸಿ"ಯಾಗಿ ಕಾರ್ಯ ನಿರ್ವಹಿಸಲು ಒತ್ತನ್ನು ನೀಡಲಾಗಿದ್ದು, ಇದಕ್ಕಾಗಿ ಈ ನಿರ್ದೇಶನಾಲಯದ ಕೇಂದ್ರ ಕಛೇರಿಯಲ್ಲಿ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ಹೊಸದಾಗಿ ಸೃಜಿಸುವ ಅವಶ್ಯಕತೆ ಇದೆಯೆಂದು ಮನಗಂಡಿದೆ. ಇದಕ್ಕಾಗಿ, ಈ ಹಿಂದೆ ಸರ್ಕಾರಿ ಆದೇಶ ಸಂಖ್ಯೆ: ಪಿಡಿಎಸ್ 138 ಎಸ್‌ಎಂಸಿ 2003 ದಿನಾಂಕ: 07–07–2006ರ ಮುಖಾಂತರ ಈ ನಿರ್ದೇಶನಾಲಯದಲ್ಲಿ ದಿನಾಂಕ: 01–04–2000 ರಂದು ಖಾಲಿ ಇದ್ದ ವಿವಿಧ ವೃಂದದ ಹುದ್ದೆಗಳಲ್ಲಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸಿದ ಸಮಯದಲ್ಲಿ ರದ್ದುಪಡಿಸಲಾದ ಜಂಟಿ ನಿರ್ದೇಶಕರು (ಪ್ರಕಟಣೆ, ತರಬೇತಿ ಮತ್ತು ಸಮನ್ವಯ) ಈ ಹುದ್ದೆಯನ್ನು ಪುನರ್ ಸೃಜಿಸಿ, ಆದೇಶವನ್ನು ಹೊರಡಿಸುವಂತೆ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಪತ್ರದಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರು ಕೋರಿರುತ್ತಾರೆ.

ಕರ್ನಾಟಕ ರಾಜ್ಯ ಕಾರ್ಯತಾಂತ್ರಿಕ ಸಾಂಖ್ಯಿಕ ಯೋಜನೆಗೆ ಸರ್ಕಾರದ ಅನುಮೋದನೆ ಪಡೆಯುವ ಸಂಬಂಧ ಪ್ರತ್ಯೇಕ ಕಡತ ಸಂಖ್ಯೆ: ಪಿಡಿ 42 ಎಸ್‌ಎಂಸಿ 2009 ರಲ್ಲಿ ಪರಿಶೀಲಿಸಲಾಗಿದ್ದು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಪೂರ್ಣ ಪ್ರಮಾಣದ "ನೋಡಲ್ ಏಜೆನ್ಸಿ"ಯಾಗಿ ಕರ್ತವ್ಯ ನಿರ್ವಹಿಸಲು ಅನುಕೂಲವಾಗುವಂತೆ ಸದರಿ ನಿರ್ದೇಶನಾಲಯದ ಕೇಂದ್ರ ಕಛೇರಿಯಲ್ಲಿ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ಹೊಸದಾಗಿ ಸೃಜಿಸಲು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಾಗು ಸಚಿವ ಸಂಪುಟದ ಅನುಮೋದನೆಯೊಂದಿಗೆ ಈಗಾಗಲೇ ಸರ್ಕಾರದ ಮಂಜೂರಾತಿಯನ್ನು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನೀಡಲಾಗಿದೆ. ಅದರಂತೆಯೇ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಿಡಿ 05 ಎಸ್‌ಎಸ್‌ಎಂ 2010, ಬೆಂಗಳೂರು ದಿನಾಂಕ: 27–08–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಪೂರ್ಣ ಪ್ರಮಾಣದ "ನೋಡೆಲ್ ಏಜೆನ್ಸಿ"ಯಾಗಿ ಕರ್ತವ್ಯ ನಿರ್ವಹಿಸಲು ಅನುಕೂಲವಾಗುವಂತೆ ಸದರಿ ನಿರ್ದೇಶನಾಲಯದ ಕೇಂದ್ರ ಕಛೇರಿಯಲ್ಲಿ ರೂ. 20025–28275ರ ವೇತನ

ಶ್ರೇಣಿಯ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗು ಮುಂದಿನ ಆದೇಶದವರೆಗೆ ಹೊಸದಾಗಿ ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 59 ವೆಚ್ಚ-6 2010 ದಿನಾಂಕ: 07-06-2010 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹಾಗು ಸಚಿವ ಸಂಪುಟದ ಪ್ರಕರಣ ಸಂಖ್ಯೆ: ಸಿ:329/2010 ದಿನಾಂಕ: 22-07-2010 ರಲ್ಲಿ ನೀಡಿರುವ ಅನುಮೋದನೆಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಸಾಯಿಬಾಬಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ (ಎಸ್-5).

ಪಿ.ಆರ್. 2311

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸಹಕಾರ ಕೈಮಗ್ಗ ನೇಕಾರರ ಮಹಾಮಂಡಳ ನಿ., ಬೆಂಗಳೂರು ಈ ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಇ 27 ಸಿಐಎಂ 2009 ಬೆಂಗಳೂರು, ದಿನಾಂಕ: 07-09-2009.
2. ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ರವರ ಪತ್ರ ಸಂಖ್ಯೆ: ಅ.ನಿ/241/ಕೈಸಸಂ/2007-08, ದಿನಾಂಕ: 10-05-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕರ್ನಾಟಕ ರಾಜ್ಯ ಸಹಕಾರ ಕೈಮಗ್ಗ ನೇಕಾರರ ಮಹಾಮಂಡಳ ನಿ., ಈ ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ: 01-04-2009 ರಿಂದ 31-03-2010ರ ವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ದಿನಾಂಕ: 10-05-2010ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಕರ್ನಾಟಕ ರಾಜ್ಯ ಸಹಕಾರ ಕೈಮಗ್ಗ ನೇಕಾರರ ಮಹಾಮಂಡಲ ನಿ., ಈ ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿಯು ದಿನಾಂಕ: 31-03-2010ಕ್ಕೆ ಅಂತ್ಯಗೊಂಡಿರುವುದರಿಂದ ಹಾಗೂ ಆಡಳಿತಾಧಿಕಾರಿಗಳು ಈ ಅವಧಿಯಲ್ಲಿನ ಹಿಂದಿನ ಸಾಲುಗಳಲ್ಲಿಯೂ ಸಹ ಯಾವುದೇ ಸದಸ್ಯ ನೇಕಾರ ಸಹಕಾರ ಸಂಘಗಳು ಮಹಾಮಂಡಳದ ಉಪನಿಯಮ ಸಂಖ್ಯೆ 13.1ರ ಪ್ರಕಾರ ರೂ. 5.00 ಲಕ್ಷ ಮೌಲ್ಯದ ಕೈಮಗ್ಗದ ಉತ್ಪನ್ನಗಳನ್ನು ಮಹಾಮಂಡಳಕ್ಕೆ ಸರಬರಾಜು ಮಾಡಿಲ್ಲದಿರುವುದರಿಂದ ಯವುದೇ ಸದಸ್ಯ ಸಹಕಾರ ಸಂಘಗಳು ಚುನಾವಣೆಗೆ ಸ್ಪರ್ಧಿಸಲು ಅರ್ಹರಿರುವುದಿಲ್ಲವೆಂದು ತಿಳಿಸಿ, ಕರ್ನಾಟಕ ರಾಜ್ಯ ಸಹಕಾರ ಕೈಮಗ್ಗ ನೇಕಾರರ ಮಹಾಮಂಡಳ ನಿ., ಈ ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ: 01-04-2010 ರಿಂದ 31-03-2011ರ ವರೆಗೆ ವಿಸ್ತರಿಸಬಹುದೆಂದು ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 17 ಸಿಐಎಂ 2010, ಬೆಂಗಳೂರು ದಿನಾಂಕ: 24-08-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸಹಕಾರ ಕೈಮಗ್ಗ ನೇಕಾರರ ಮಹಾಮಂಡಳ ನಿ., ಈ ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ: 01-04-2010 ರಿಂದ 31-03-2011ರ ವರೆಗೆ ವಿಸ್ತರಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 30 (1)ರ ಉಪಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 30(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31-03-2011ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 30(1)ರ ಕಲಂನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 2312

## ಶಿಕ್ಷಣ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ರಾಜ್ಯವಲಯ ಮುಂದುವರಿದ ಕಾರ್ಯಕ್ರಮದಡಿ ಉಪನಿರ್ದೇಶಕರು, ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ನಿರ್ಮಾಣ ಹಾಗೂ ದುರಸ್ತಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಯೋ 7 ಉ.ನಿ/ಕ್ಷೇ.ಶಿ.ಕ.ನಿ. ದುರಸ್ಥಿ 2/2010–2011/ದಿನಾಂಕ: 07–05–2010.

**ಪ್ರಸ್ತಾವನೆ :**

1. ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರು 2010–11ನೇ ಸಾಲಿಗೆ ರಾಜ್ಯವಲಯ ಯೋಜನೆಯ ಮುಂದುವರಿಕೆ ಕಾರ್ಯಕ್ರಮದಡಿ ಲೆಕ್ಕ ಶೀರ್ಷಿಕೆ 2202–02–800–10–059ರಡಿ ಒದಗಿಸಲಾಗಿರುವ 600.00 ಲಕ್ಷ ರೂಪಾಯಿಗಳಲ್ಲಿ ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ/ದುರಸ್ತಿಗಾಗಿ 250.00 ಲಕ್ಷ ರೂ.ಗಳನ್ನು ಒದಗಿಸಿಕೊಳ್ಳಲಾಗಿದೆ. ಈ ಮೊತ್ತದಲ್ಲಿ 2009–10ನೇ ಸಾಲಿಗೆ ಅನುಮತಿ ನೀಡಿ ಮುಂದುವರೆಯುತ್ತಿರುವ ಕಾಮಗಾರಿಗಳಿಗಾಗಿ 163.91 ಲಕ್ಷ ರೂ.ಗಳನ್ನು ಹಾಗೂ ಉಳಿಕೆ ಮೊತ್ತದಲ್ಲಿ 3 ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ 40.00 ಲಕ್ಷ ರೂ.ಗಳು ಹಾಗೂ ಶಿರಸಿ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಛೇರಿ ನಿರ್ಮಾಣಕ್ಕಾಗಿ 30.00 ಲಕ್ಷ ರೂ.ಗಳು ಹೀಗೆ ಒಟ್ಟು 70.00 ಲಕ್ಷ ರೂ.ಗಳು, 9 ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದುರಸ್ತಿಗಾಗಿ 14.09 ಲಕ್ಷ ರೂ.ಗಳು ಹಾಗೂ ಉತ್ತರ ಕನ್ನಡ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಛೇರಿ ದುರಸ್ತಿಗಾಗಿ 2.00 ಲಕ್ಷ ರೂ.ಗಳು ಹೀಗೆ ಒಟ್ಟು 16.09 ಲಕ್ಷ ರೂ.ಗಳು, ಹಂಚಿಕೆ ಮಾಡಿಕೊಂಡಿದ್ದು ಅದಕ್ಕೆ ಅನುಮೋದನೆ ನೀಡುವಂತೆ ಕೋರಿರುತ್ತಾರೆ.
2. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 133 ಯೋಸಕ 2010, ಬೆಂಗಳೂರು ದಿನಾಂಕ: 13–08–2010.**

[**ಇಡಿ: 102: ಸ್ವೀಮರ (ಯುನಿಕ್) 2010, ದಿನಾಂಕ: 13–08–2010.**]

2010–11ನೇ ಸಾಲಿಗೆ ರಾಜ್ಯವಲಯ ಯೋಜನೆಯ ಮುಂದುವರಿಕೆ ಕಾರ್ಯಕ್ರಮದಡಿ ಲೆಕ್ಕ ಶೀರ್ಷಿಕೆ 2202–02–800–10–059 ರಡಿ ಒದಗಿಸಲಾಗಿರುವ 600.00 ಲಕ್ಷ ರೂಪಾಯಿಗಳಲ್ಲಿ ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ/ದುರಸ್ಥಿಗಾಗಿ ಕಲ್ಪಿಸಿಕೊಂಡಿರುವ 250.00 ಲಕ್ಷ ರೂ.ಗಳಲ್ಲಿ (ಇನ್ನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅನುಬಂಧ 1,2,3 ರಲ್ಲಿನ ಕಾಮಗಾರಿಗಳಿಗೆ ಅವುಗಳ ಮುಂದೆ ತೋರಿಸಿರುವ ಅನುದಾನದ ಮಿತಿಯೊಳಗೆ ಅನುಷ್ಠಾನಗೊಳಿಸಲು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

**ಷರತ್ತುಗಳು:**

- ಮೇಲ್ಕಂಡ ಲೆಕ್ಕಶೀರ್ಷಿಕೆಯಲ್ಲಿ ಒದಗಿಸಿರುವ ಅನುದಾನದ ಶೇಕಡ 25 ರಷ್ಟನ್ನು ಮಾತ್ರ ಮೊದಲನೇ ತ್ರೈಮಾಸಿಕ ಕಂತಿನಲ್ಲಿ ವೆಚ್ಚ ಮಾಡತಕ್ಕದ್ದು.
- ಜಿಲ್ಲಾ ಪಂಚಾಯತ್ ಇಂಜಿನಿಯರ್ ವಿಭಾಗದಿಂದ ಕಾಮಗಾರಿಗಳನ್ನು ಕೈಗೊಳ್ಳತಕ್ಕದ್ದು.
- ಆಯಾ ಜಿಲ್ಲೆಗಳ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆರವರು ಪೇಯಿಸ್ ರಸೀತಿ ಮೂಲಕ ಸೆಳೆದು ಕಾಮಗಾರಿಗಳಿಗೆ ಅನುದಾನವನ್ನು ಪ್ರಗತಿಯನ್ನು ಆಧರಿಸಿ ಬಿಡುಗಡೆ ಮಾಡತಕ್ಕದ್ದು.
- ಖರೀದಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಎಲ್ಲಾ ನಿಯಮಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
- ಹೊಸ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಅಂದಾಜು ಪಟ್ಟಿ ಮತ್ತು ನಕ್ಷೆಯನ್ನು ಪಡೆದು ಆಡಳಿತಾತ್ಮಕ ಅನುಮೋದನೆ ಪಡೆದು ಕಾಮಗಾರಿಯನ್ನು ಪ್ರಾರಂಭಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

### ಸರ್ಕಾರದ ಆದೇಶ ಸಂಖ್ಯೆ ಇಡಿ: 133:ಯೋಸಕ 2010 ದಿನಾಂಕ: 13–08–2010ಕ್ಕೆ ಅನುಬಂಧ–1

[ರೂ. ಲಕ್ಷಗಳಲ್ಲಿ]

| ಕ್ರ. ಸಂ. | ಕಟ್ಟಡ ನಿರ್ಮಾಣ | ಒಟ್ಟು ಅಂದಾಜು ಮೊತ್ತ | 2010–11ರಲ್ಲಿ ಬಿಡುಗಡೆ ಮಾಡಬೇಕಾದ ಮೊತ್ತ | 1ನೇ ಕಂತು |
|---|---|---|---|---|
| 1 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಆನೇಕಲ್ ಬೆಂ. ನಗರ ಜಿಲ್ಲೆ | 40.00 | 30.00 | 10.00 |
| 2 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಹೊಸಕೋಟೆ ಬೆಂ. ಗ್ರಾಮಾಂತರ ಜಿಲ್ಲೆ | 40.00 | 30.00 | 0.00 |
| 3 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದೇವನಹಳ್ಳಿ ಬೆಂ. ಗ್ರಾಮಾಂತರ ಜಿಲ್ಲೆ | 40.00 | 30.00 | 0.00 |

| | | | | |
|---|---|---|---|---|
| 4 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಾಗವಾಡ, ಚಿಕ್ಕೋಡಿ ತಾಲ್ಲೂಕು, ಚಿಕ್ಕೋಡಿ ಜಿಲ್ಲೆ | 16.43 | 11.43 | 11.43 |
| 5 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಹಿರೇಕೆರೂರು, ಹಾವೇರಿ ಜಿಲ್ಲೆ | 30.20 | 8.70 | 8.70 |
| 6 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಶಿರಸಿ, ಶಿರಸಿ ಜಿಲ್ಲೆ | 40.00 | 26.25 | 10.00 |
| 7 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಸಿದ್ದಾಪುರ | 25.00 | 20.00 | 10.00 |
| 8 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಖಾನಾಪುರ ಬೆಳಗಾಂ ಜಿಲ್ಲೆ | 33.65 | 18.43 | 10.00 |
| 9 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ತುಮಕೂರು | 65.00 | 35.00 | 0.00 |
| 10 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಮೂಡಿಗೆರೆ | 5.00 | 5.00 | 0.00 |
| 11 | ಉಪ ನಿರ್ದೇಶಕರ ಕಛೇರಿ, ಮೈಸೂರು | 45.00 | 5.00 | 1.30 |
| 12 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ರಾಮನಗರ | 45.00 | 9.00 | 0.00 |
| 13 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಮಂಗಳೂರು | 45.00 | 10.00 | 0.00 |
| | **ಒಟ್ಟು** | **475.28** | **163.91** | **61.43** |

## ಸರ್ಕಾರದ ಆದೇಶ ಸಂಖ್ಯೆ ಇಡಿ: 133:ಯೋಸಕ 2010 ದಿನಾಂಕ: 13-08-2010ಕ್ಕೆ ಅನುಬಂಧ-2

[ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಛೇರಿಯ ಹೆಸರು | ಮಂಜೂರಾತಿ ಮಾಡಬೇಕಾದ ಅನುದಾನ | 2010-11ನೇ ಸಾಲಿಗೆ ಮಂಜೂರು ಮಾಡಿದ ಅನುದಾನ |
|---|---|---|---|
| 1 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಚಡಚಣ, ಬಿಜಾಪುರ ಜಿಲ್ಲೆ | 25.00 | 15.00 |
| 2 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಮುಂಡಗೋಡ, ಉ.ಕ. ಜಿಲ್ಲೆ | 25.00 | 10.00 |
| 3 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಕಡೂರು, ಚಿಕ್ಕಮಗಳೂರು ಜಿಲ್ಲೆ | 20.00 | 10.00 |
| 4 | ಉ.ನಿ.ಕಛೇರಿ ಶಿರಸಿ, ಶಿರಸಿ ಜಿಲ್ಲೆ | 70,00 | 35.00 |
| | ಒಟ್ಟು | 140.00 | 70.00 |

## ಸರ್ಕಾರದ ಆದೇಶ ಸಂಖ್ಯೆ ಇಡಿ: 133: ಯೋಸಕ 2010 ದಿನಾಂಕ: 13-08-2010ಕ್ಕೆ ಅನುಬಂಧ-3

| ಕ್ರ. ಸಂ. | ಕಛೇರಿಯ ಹೆಸರು | 2010-11ನೇ ಸಾಲಿಗೆ ಮಂಜೂರು ಮಾಡಿದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 1 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಬೀಳಗಿ | 1.00 |
| 2 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಹುನಗುಂದ | 1.00 |
| 3 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಮೂಡಬಿದ್ರೆ | 1.00 |
| 4 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಹೊನ್ನಾವರ | 1.00 |
| 5 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಪಿರಿಯಾಪಟ್ಟಣ | 1.00 |
| 6 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಮುಧೋಳ | 1.00 |
| 7 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಭಟ್ಕಳ | 2.09 |
| 8 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಉತ್ತರವಲಯ-3 | 1.00 |
| 9 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಬೆಂಗಳೂರು ದಕ್ಷಿಣ ವಲಯ-1 | 5.00 |
| 10 | ಉಪನಿರ್ದೇಶಕರ ಕಛೇರಿ, ಉತ್ತರ ಕನ್ನಡ ಜಿಲ್ಲೆ | 2.00 |
| | **ಒಟ್ಟು** | **16.09** |

– **ಘೋಷ್ವಾರೆ** –

| | |
|---|---|
| 2009–10ನೇ ಸಾಲಿನ ಉ.ನಿ.ಕಛೇರಿ/ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ ಬಾಕಿ ಹಣ – | ರೂ. 163.91 ಲಕ್ಷ |
| 2010–11ನೇ ಸಾಲಿಗೆ ಉ.ನಿ.ಕಛೇರಿ/ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ – | ರೂ. 70.00 ಲಕ್ಷ |
| 2010–11ನೇ ಸಾಲಿಗೆ ಉ.ನಿ.ಕಛೇರಿ/ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದುರಸ್ತಿಗಾಗಿ – | ರೂ. 16.09 ಲಕ್ಷ |
| **ಒಟ್ಟು** | **–ರೂ. 250.00 ಲಕ್ಷ** |

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ [ಯೋಜನೆ]

ಪಿ.ಆರ್. 2313

## MINORITY WELFARE SECRETARIAT

**Sub:** Appointment of Khazi Sri Khaza Irfanulla Harooni S/o Late Khaja Amanulla Harooni as Khazi of Sedam Taluk & surrounding villages, Gulbarga District regarding.

**Read:** (i) Letter No. : KBW/15/ADM/2008-09, dated : 11-09-2008 of the Chief Executive Officer, Karnataka State Board of Wakfs, Bangalore.

(ii) Letter No. ಕಂ/ಭೂಸು/ವಕ್ಫ್/102/2008-09, dated : 04-05-2009 of the Deputy Commissioner, Gulbarga District, Gulbarga.

**Preamble :**

The Karnataka State Board of Wakfs, Bangalore has forwarded the representation of Sri. Khaja Irfanulla Harooni, S/o Khaja Amanulla Harooni R/o Sedam Town, Sedam Taluk, Gulbarga District, stating that his fore- fathers who were performing the duties of Khazzath of Sedam Taluk and surrounding villages of Sedam expired on 28-05-2002 & 29-01-2002 respectively. The local Mohammedans have given their consent through Mahazar to appoint him as Khazi of Sedam Taluk and surrounding villages. The Wakf Board has also recommended for his appointment.

The Deputy Commissioner, Gulbarga District in his letter read at (2) above, has stated that he had investigated the case through his Revenue Inspector and Tahsildar and they have opined that there is no dispute with regard to the appointment of Sri Khaja Irfanulla Harooni as Khazi of Sedam Taluk and its surrounding villages and has recommended for his appointment. Hence this Order.

**Government Order No. MWD 374 WES 2008, Bangalore, Dated: 18-10-2010**

In exercise of the powers conferred under Section 2 of Khazi Act, 1880, Government is pleased to appoint Sri Khaja Irfanulla Harooni S/o Khaja Amanulla Harooni, R/o Sedam Town as Khazi of Sedam Taluk and its 15 surrounding villages of Sedam Taluk, Gulbarga District as shown in Annexure-I, with immediate effect and until further Orders.

By Order and in the name of the Governor of Karnataka
**ABBAS SHARIEFF**
Under Secretary to Government
Minority Welfare Department.

## ANNEXURE-I

**List of Villages Under Sedam Taluk, Gulbarga District**

| Sl. No. | Name of Village |
|---|---|
| 1. | Sedam |
| 2. | Telkoor |
| 3. | Habad |
| 4. | Manoor |
| 5. | CCI Colony Kur Kunta |
| 6. | Survaar |
| 7. | Sat patnalli |
| 8. | Halli |
| 9. | Tarnalli |
| 10. | Mathkal |
| 11. | Biballi |
| 12. | Yadalli |
| 13. | Hooda |
| 14. | Udigi |
| 15. | Batgere |

**ABBAS SHARIEFF**
Under Secretary to Government
Minority Welfare Department.

P.R. No. 2735

## INFRASTRUCTURE DEVELOPMENT SECRETARIAT

**Sub :-** Sanction of Rs. 10.00 lakhs as sponsorship contribution to Confederation of Indian Industry (CII) Chennai as "Partner State" Suminfra 2010-reg.

**Read :-** Letter dated 19-06-2010 from the Chairman Suminfra 2010 Confederation of Indian Industry, Chennai.

***

**Preamble:**

The Chairman Suminfra 2010, in his letter read at above has informed that Confederation of Indian Industry (SR) is organizing the 8th Edition of its annual summit on Sustainable PPP's in Infrastructure Suminfra 2010 on August 12th and 13th 2010 at Hotel Le Meredien, Bangalore.

Further he has stated that, Suminfra is a unique forum promoted by the CII jointly with the State Government in Southern region, to promote public private partnership in Infrastructure development in Southern States and suminfra brings together all stakeholders concerned with infrastructure development on 9 common platform. It would unveil opportunities for industry in infrastructure development in various areas in the southern region. Suminfra enable the policy makers to appreciate the risk perceptions and concerns of the industry, which needs to be addressed, it also helps financial institutions to understand critical issues related to infrastructure projects.

In view of this, the CII, Chennai, has seek Government of Karnataka's participation and support as "Partner State' at the Suminfra 2010, by way of sponsorship and requested to contribute Rs. 10.00 lakhs in this regard, Hence the following Order.

**Government Order No. IDD 142 ITS 2010, Bangalore, dated : 07-08-2010**

After careful examination of the proposal of the CII, Chennai, Government is pleased to sanction Rs. 10.00 lakhs (Rupees ten lakhs only) contribution for participation and support as 'Partner State at the Suminfra 2010 by way of sponsorship to CII, Chennai.

2. The expenditure shall be met out under the Head of account 3451-00-090-1-06-059- infrastructure preliminary studies other expenditure (plan) in the budget for the year 2010-11.

3. The Managing Director, KSIIDC is authorized to drawn this amount on a payees receipt duly counter signed by the Under Secretary to Govt., infrastructure Development Department by State Huzoor Treasury, Bangalore.

4. This Order is issued in accordance with the delegation of Financial powers to Principal Secretary to Govt., No. FD 1 TFP 2008 dated 16-05-2008.

By Order and in the name of theGovernor of Karnataka

(**R. Shivalingaiah)**

Under Secretary to Govt.,

Infrastructure Development Department

P.R. No. 2180

## HORTICULTURE SECRETARIAT

**Sub :-** "Centrally Sponsored Scheme on Micro Irrigation" Implementation during 2010-11-reg.

**Read :-** (1) GOI letter F.No. 11-7/2010-Hort dated 22-04-2010.

(2) GOI letter F.No. 11-4/2010-Hort II dated 17-05-2010.

(3) GOI letter F.No. 20-6/2009-Hort II dated 21-06-2010.

(4) GOI letter F.No. 20-4/2009-Hort dated 01-07-2010.

(5) Letter of Director of Horticulture No. DH/JDH (Drip)/ AHO-1/4/10-11 dated 09-07-2010.

***

**Preamble:**

In the Government of India letter read at (1) above, Horticulture Division of the Department of Agriculture & Co-operation has conveyed approval for Implementation of "Centrally Sponsored Scheme on Micro Irrigation" during 2010-11, on the pattern of assistance and components included in the guidelines of the scheme. State Governments have been requested to submit consolidated project proposal in the form of Annual Action Plan for 2010-11 in accordance with the operational guidelines of Micro Irrigation Scheme for approval by Executive Committee of NCPAH on Micro Irrigation.

2 In the Government of India letter read at (2) above, it is informed that the Executive Committee on Micro Irrigation in its 10th meeting held under the Chairmanship of Secretary (A&C) on 10-05-2010 has approved Annual Action Plan (AAP) 2010-11 in respect of Karnataka with the Central Share of Rs. 130.00 crore (for both Horticulture and Non- Horticulture crops, including the component of "Transfer of Technology" and "Administrative cost") Government of India has requested the State Government to

Intimate about the matching State share and targeted area to be covered under Horticulture and Non- Horticulture during this year along with "Transfer of Technology" (ToT) proposals (as per the Scheme Guidelines).

3. In the Government of India letter read at (3) above, Government of India has allocated a sum of Rs. 76.00 crores as Central share during 2010-11 for the State of Karnataka on the basis of Annual Action Plan (AAP).

4. Further, Government of India has released an amount of Rs. 3650.00 lakhs towards 1st installment of the Central Share during 2010-11 to the State Micro Irrigation Committee Karnataka vide in its letter read at (4) above.

5. Accordingly, the Director for Horticulture in his letter read at (5) above has the requested the Government to provide administrative approval for the continuation of the "Centrally Sponsored Scheme on Micro Irrigation" for the year 2010-11 and release corresponding State share of Rs. 3373.80 lakhs. Further, he has requested the Government to permit the State share to be drawn by Grant-in Aid Bills and to be deposited to the Micro Irrigation Account into which Government of India share has been deposited. The State share has been provided under State Sector and District Sector.

6. The proposal has been examined and hence this Order.

**Government Order No. HCD 92 HPP 2010, Bangalore, dated : 12-08-2010**

Government is pleased to accord administrative approval for the implementation of the "Drip Irrigation- special subsidy for the horticulture crops" Head of Account 2401-00-108-2-30 as a district sector scheme during the year 2010-11 on Mission Mode.

2. The sharing pattern will be as below;

| **Sl No** | **Component** | **Pattern of Assistance** | **Pattern of sharing** |
|---|---|---|---|
| 1<br><br>2. | Drip Irrigation<br><br>Sprinkler Irrigation | 40% of total cost as Government of India share 35% of Total cost as State Government share and remaining 25% to be borne by beneficiaries. | 40:35:25 |
| 3. | Demonstration | 75% of total cost as Government of India share 25% of as State share. | 75:25 |

3. The subsidy under the scheme for 2010-11 will be as below;

a) Drip Irrigation

1) Subsidy will be provided at the rate of 75% all over the State to all categories of farmers up to an extent of 2 hectares per beneficiary family. The subsidy will be 50 % up to an extent between 2 ha. To 5 ha as per Government of India guidelines.

2) For the applications which have been installed and pending for payment of subsidy as on 31-03-2010, subsidy will be provided at the rate of 75% all over the State and 100% in Bijapur, Kolar and Chickballapur districts to all categories of farmers up to an extent of 2 hectares per beneficiary family. The subsidy will be 50 % up to an extent between 2 ha. and 5 ha. as per Government of India Guidelines.

b) Sprinkler Irrigation:

Subsidy will be provided at the rate 75% all over the State to all categories of farmers up to an extent of 2 hectares per beneficiary family. The subsidy will be 50 % up to extent between 2 ha. to 5 ha. as per Government of India Guidelines. However, Sprinkler Irrigation will be applicable only for those crops where drip irrigation is uneconomical.

4. The Director of Horticulture shall issue operational guidelines along with the physical and financial targets for each district. He shall release corresponding State share to each district as and when Central Government releases the funds after confirming that the funds are accounted as outstanding balance available in the respective Bank Account. The State share will be drawn through grant-in-aid bills and deposited in the Micro Irrigation Account into which Government of India share has been deposited. Together the Central share and State share will be utilized for implementing the scheme.

5. The scheme shall be implemented strictly as per the operational guidelines issued by government of India, guidelines issued at the time of giving administrative approval, approval for the Annual Action Plan and the conditions stipulated during release of Government of India funds. Under no circumstances the expenditure should be exceed beyond the Central share actually received and corresponding State share.

6. Before seeking releases under the scheme the Director of Horticulture shall furnish the utilization Certificate for the amount released already under State sector and District sector along with the details of Government of India release during the current year.

7. The Director of Horticulture shall ensure that 16% and 8 % of the funds are targeted for Scheduled Castes and Scheduled Tribes farmers/beneficiaries respectively, and at least 30 % of the budget allocations are earmarked for women beneficiaries /farmers.

8. An amount of Rs. 387.50 lakhs (Rupees Three Hundred and Eighty Seven lakhs fifty thousand only) is released to the Director of Horticulture towards the matching State share under the Head of Account 2401-00-108-2-30 (State Plan) as below;

| Object Code | Sub Head | Amount Released ( Rs. In lakhs) |
|---|---|---|
| 059 | Other expenses | 312.50 |
| 422 | Special Component Plan | 50.00 |
| 423 | Tribal Sub Plan | 25.00 |
| | Total | 387.50 |

9. This Order issues with the concurrence of Internal Financial Advisor, Agriculture and Horticulture Department vide its Note No. ತೋಇ 30 ಅಂಅಸ 2010 dated : 09-08-2010

By Order and in the name of the Governor of Karnataka

(**S. Raju)**

P.R. No. 2181

Under Secretary to Govt.,
Horticulture Department

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2010–11ನೇ ಸಾಲಿನ ಕೆಬಿಟ್ಸ್ ಸಂಸ್ಥೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1) ಸರ್ಕಾರಿ ಅದೇಶ ಸಂಖ್ಯೆ : ಮಾತಂಇ 35 ಆಡವಿ 2010 ದಿನಾಂಕ: 15–04–10.
2) ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 54 ಆಡವಿ 2010 (2) ದಿನಾಂಕ: 07–05–10.
3) ಸರ್ಕಾರಿ ಅದೇಶ ಸಂಖ್ಯೆ : ಮಾತಂಇ 54 ಆಡವಿ 2010 ದಿನಾಂಕ: 15–07–10.
4) ಅಪರ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರ ಪತ್ರ ಸಂಖ್ಯೆ : ಕೆಬಿಟ್ಸ್/ಎಸಿಟಿ/23/2009–10 ದಿನಾಂಕ : 04–08–2010.

**ಪ್ರಸ್ತಾವನೆ :**

2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–01 ಮಾಹಿತಿ ತಂತ್ರಜ್ಞಾನ–ಉನ್ನತೀಕರಣ ಮತ್ತು ಅಭಿವೃದ್ಧಿ 059 ಇತರೆ ಖರ್ಚು [ಯೋಜನೆ]' ರಡಿಯಲ್ಲಿ ರೂ. 1000.00 ಲಕ್ಷಗಳ ಅನುದಾನವನ್ನು ಒದಗಣೆ ಮಾಡಲಾಗಿದೆ. ಅದರಲ್ಲಿ ಬೆಂಗಳೂರು ಐಟಿ–ಬಿಜ್ 2010 ಮತ್ತು ಬೆಂಗಳೂರು ಬಯೋ 2010 ಈವೆಂಟ್‌ಗಳು ಸೇರಿದಂತೆ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಉನ್ನತೀಕರಣ ಚಟುವಟಿಕೆಗಳಿಗಾಗಿ ರೂ. 300.00 ಲಕ್ಷಗಳನ್ನು ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ಮೇಲೆ (2) ಮತ್ತು (3)ರಲ್ಲಿ ಓದಲಾದ ದಿನಾಂಕ 07–05–2010 ಮತ್ತು 15–07–2010ರ ಸರ್ಕಾರಿ ಆದೇಶಗಳಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಉನ್ನತೀಕರಣ ಚಟುವಟಿಕೆಗಳಿಗಾಗಿ ಅನುಕ್ರಮವಾಗಿ ರೂ. 75.00 ಲಕ್ಷ ಮತ್ತು ರೂ. 100.00 ಲಕ್ಷ ಒಟ್ಟು ರೂ. 175.00 ಲಕ್ಷಗಳ ಅನುದಾನವನ್ನು 2010–11ನೇ ಸಾಲಿನಲ್ಲಿ ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಅಪರ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ 2010–11 ಸಾಲಿನ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಉನ್ನತೀಕರಣ ಚಟುವಟಿಕೆಗೆ ಸಂಬಂಧಿಸಿದಂತೆ ಆಗಸ್ಟ್ 2010ರಿಂದ ಅಕ್ಟೋಬರ್ 2010ರ ವರೆಗೆ ಉದ್ದೇಶಿತ ವೆಚ್ಚಗಳಾದ (ಐಟಿ ಬಿಜ್, ಬ್ರೋಚರ್ /ಸೀಡಿಗಳ ತಯಾರಿಕೆ, ಜಾಹಿರಾತು, ಮೇಳಗಳಲ್ಲಿ ಭಾಗವಹಿಸುವಿಕೆ ಇತ್ಯಾದಿ) ಹಾಗೂ ಬಾಕಿ ಇರುವ ಬಿಲ್ಲುಗಳ ಪಾವತಿಗಾಗಿ ರೂ. 1,05,56,547 ಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರೂ, 100.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 54 ಅಡವಿ 2010, ಬೆಂಗಳೂರು, ದಿನಾಂಕ 11ನೇ ಆಗಸ್ಟ್, 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಉನ್ನತೀಕರಣ ಚಟುವಟಿಕೆ ಸಂಬಂಧಿಸಿದಂತೆ ಆಗಸ್ಟ್ 2010ರಿಂದ ಅಕ್ಟೋಬರ್ 2010ರ ವರೆಗೆ ಭರಿಸಬೇಕಾದ ವೆಚ್ಚ ಹಾಗೂ ಬಾಕಿಯಿರುವ ಬಿಲ್ಲುಗಳನ್ನು ಪಾವತಿಸಲು ರೂ. 100.00 ಲಕ್ಷಗಳ (ನೂರು ಲಕ್ಷಗಳು ಮಾತ್ರ) ಅನುದಾನವನ್ನು 2010–11ನೇ ಸಾಲಿನಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಸಂಸ್ಥೆಗೆ ಪಾವತಿಸಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ದಿ–059–ಇತರೆವೆಚ್ಚ (ಯೋಜನೆ)' ಇದರ ಅಡಿಯಲ್ಲಿ ಪ್ರಸ್ತಕ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶಗಳ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008 ದಿನಾಂಕ: 16–05–2008 ರಲ್ಲಿ ಇಲಾಖಾ ಪ್ರಧಾನಾ ಕಾರ್ಯದರ್ಶಿ/ಕಾರ್ಯದರ್ಶಿ ರವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಇಂದುಮತಿ**
ಸರ್ಕಾರದ ಉಪ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿಆರ್–2182

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕೆ.ಎಸ್.ಪಿ.ಡಿ.ಸಿ. ನಿಗಮದಿಂದ ಅನುಷ್ಠಾನಗೊಳ್ಳುವ ಯೋಜನೆಗಳಿಗೆ ಉಸ್ತುವಾರಿ ಸಮಿತಿ ರಚಿಸುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಪಿ.ಡಿ.ಸಿ. ಇವರ ಪತ್ರ ಸಂಖ್ಯೆ: ವಿಮನಿ/ಸುವನಿ/ಉಸ/2010–11/675, ದಿ, 27–07–2010.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ನಿಯಮಿತವು 2010–11ನೇ ಸಾಲಿನಲ್ಲಿ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲು ಯೋಜಿಸಲಾಗಿದೆ.

| | | | |
|---|---|---|---|
| 1. | ಹೊಸದುರ್ಗದಲ್ಲಿ ಸಿದ್ದ ಉಡುಪು ತರಬೇತಿ ಮತ್ತು ವಿನ್ಯಾಸ ಕೇಂದ್ರ ಸ್ಥಾಪನೆ ಯೋಜನಾ ವೆಚ್ಚ | – | ರೂ. 80.00 ಲಕ್ಷಗಳು |
| 2. | ಶಿವಮೊಗ್ಗದಲ್ಲಿ ಸಿದ್ದ ಉಡುಪು ತರಬೇತಿ ಮತ್ತು ವಿನ್ಯಾಸ ಕೇಂದ್ರ ಸ್ಥಾಪನೆ ಯೋಜನಾ ವೆಚ್ಚ | – | ರೂ. 459.00 ಲಕ್ಷಗಳು |
| 3. | ದೊಡ್ಡಬಳ್ಳಾಪುರದಲ್ಲಿ ಸಿದ್ದ ಉಡುಪು ತರಬೇತಿ ಕೇಂದ್ರ ಸ್ಥಾಪನೆ ಯೋಜನಾ ವೆಚ್ಚ | – | ರೂ. 400.00 ಲಕ್ಷಗಳು |
| 4. | ರಬಕವಿ–ಬನಹಟ್ಟಿಯಲ್ಲಿ ಕೋನೆ ಡೈಯಿಂಗ್ ಘಟಕ ಪಿಪಿಪಿ ಮಾದರಿಯಲ್ಲಿ ಸ್ಥಾಪನೆ ಯೋಜನಾ ವೆಚ್ಚ ಅದೇ ಮಾದರಿಯಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಕೋನ್ ಡೈಯಿಂಗ್ ಘಟಕ ಸ್ಥಾಪನೆ | – | ರೂ. 1500.00 ಲಕ್ಷಗಳು |
| 5. | ಬಳ್ಳಾರಿಯಲ್ಲಿ ಸಿದ್ಧ ಉಡುಪು ಸಮೂಹ ಸ್ಥಾಪನೆ ಅಂದಾಜು ಯೋಜನಾ ವೆಚ್ಚ | – | ರೂ. 2000.00 ಲಕ್ಷಗಳು |
| 6. | ಗದಗ್–ಬೆಟಗೇರಿ 1000 ವಿದ್ಯುತ್ ಮಗ್ಗಗಳ ಸಂಕೀರ್ಣದಲ್ಲಿ ಜವಳಿ ಪಾರ್ಕ್ ಸ್ಥಾಪನೆ | | |
| 7. | ನಿಗಮಕ್ಕೆ ಸ್ವಂತ ಕಟ್ಟಡ ನಿರ್ಮಿಸುವ ಕುರಿತು. | | |

ಮೇಲಿನ ಯೋಜನೆಗಳ ಅನುಷ್ಠಾನಕ್ಕೆ ಕಟ್ಟಡ ನಿರ್ಮಾಣ ಇತರೆ ಮೂಲಭೂತ ಸೌಕರ್ಯ, ವಿದ್ಯುದೀಕರಣ ಕಾಮಗಾರಿಗಳು, ಆರ್ಥಿಕ ಸಂಪನ್ಮೂಲಗಳನ್ನು ಕ್ರೋಢೀಕರಿಸುವುದು, ನುರಿತ ಸಿಬ್ಬಂದಿ ನೇಮಿಸುವುದು ಮತ್ತು ಯಂತ್ರೋಪಕರಣಗಳ ಖರೀದಿ ಪ್ರಕ್ರಿಯೆ ಮೇಲ್ವಿಚಾರಣೆ ನಡೆಸಲು ಯೋಜನಾ ಉಸ್ತುವಾರಿ ಸಮಿತಿಯನ್ನು ನೇಮಿಸುವುದು ಅವಶ್ಯವಾಗಿರುತ್ತದೆ. ಅದ್ದರಿಂದ ಈ ಉಸ್ತುವಾರಿ ಸಮಿತಿಯನ್ನು ಸರ್ಕಾರದ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ರಚಿಸಲು ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಪಿ.ಡಿ.ಸಿ. ಇವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಅದರನ್ವಯ ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ನಿಯಮಿತದ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಉಸ್ತುವಾರಿ ಸಮಿತಿಯೊಂದನ್ನು ರಚಿಸಲು ಸರ್ಕಾರವು ಉದ್ದೇಶಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 18 ಜವಿಮ 2010, ಬೆಂಗಳೂರು, ದಿನಾಂಕ: 09–08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ನಿಯಮಿತದ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ, ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮನ್ವಯ ಸಮಿತಿಯನ್ನು ಸರ್ಕಾರವು ರಚಿಸಿದೆ:–

| | | | |
|---|---|---|---|
| 1. | ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | – | ಅಧ್ಯಕ್ಷರು |
| 2. | ಆವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ | – | ಸದಸ್ಯರು |
| 3. | ಸರ್ಕಾರದ ಉಪ ಕಾರ್ಯದರ್ಶಿ (ಜವಳಿ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | – | ಸದಸ್ಯರು |

| | | |
|---|---|---|
| 4. ಜವಳಿ ಆಯುಕ್ತರು, ಮುಂಬೈ ಅಥವಾ ಅವರ ಪ್ರತಿನಿಧಿ | – | ಸದಸ್ಯರು |
| 5. ನಿರ್ದೇಶಕರು, ನಿಫ್ಟ್ | – | ಸದಸ್ಯರು |
| 6. ಆಂತರಿಕ ಆರ್ಥಿಕ ಸಲಹೆಗಾರರು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | – | ಸದಸ್ಯರು |
| 7. ವ್ಯವಸ್ಥಾಪಕ ನಿರ್ದೇಶಕರು, ವಿಐಟಿಸಿ | – | ಸದಸ್ಯರು |
| 8. ವ್ಯವಸ್ಥಾಪಕ ನಿರ್ದೇಶಕರು, ಎಟಿಡಿಸಿ | – | ಸದಸ್ಯರು |
| 9. ಐ.ಎಲ್. ಮತ್ತು ಎಫ್.ಎಸ್. ಸಂಸ್ಥೆಯ ಪ್ರತಿನಿಧಿ | – | ಸದಸ್ಯರು |
| 10. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ನಿ., | – | ಸದಸ್ಯ ಕಾರ್ಯದರ್ಶಿ |

ಹಾಗೂ

**ವಿಶೇಷ ಆಹ್ವಾನಿತರು:**

1. ಶ್ರೀ ನಿಂಗೇಗೌಡ ಪ್ರೊಫೆಸರ್ ಹಾಗೂ ಕೋ ಆರ್ಡಿನೇಟರ್, ಬೆಂಗಳೂರು ವಿಶ್ವವಿದ್ಯಾಲಯ,
2. ಶಾಹಿ ಎಕ್ಸ್‌ಪೋರ್ಟ್ಸ್ ಪ್ರೈವೇಟ್ ಲಿಮಿಟೆಡ್‌ನ ಪ್ರತಿನಿಧಿ
3. ಬಾಂಬೆ ರೆಯಾನ್ ಫ್ಯಾಷನ್ಸ್ ಲಿ., ಪ್ರತಿನಿಧಿ.
4. ಗೋಕುಲ ದಾಸ್ ಎಕ್ಸ್‌ಪೋರ್ಟ್ಸ್‌ನ ಪ್ರತಿನಿಧಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಎಸ್. ಗಣಪತಿ)**

ಸರ್ಕಾರದ ಉಪ ಕಾರ್ಯದರ್ಶಿ,

ಪಿಆರ್–2183 ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

## HORTICULTURE SECRETARIAT

**Sub :-** "Scheme for integrated Farming in Coconut for Productivity/Improvement with Coconut Development Board Assistance (100% CDB)"- Release of funds reg.

**Read :-** 1) GO. No. HCD 51 HPP 2010, dated 16-07-2010.

2) Letter of Director of Horticulture No. DH/PC/AHO-2/14/09-10, dated 26-07-2010.

**Preamble:**

An amount of Rs. 175.00 lakhs (Rupees One Hundred and Seventy Five Lakhs only) to the Director of Horticulture under the "Scheme for integrated Farming in Coconut for Productivity Improvement in the State" during 2009-10 under the Head of Account 2401-00-108-2-35-100 (Financial Assistance /Relief) as per Government Order read at (1) above.

2. The Director of Horticulture vide in his letter read at (2) above has requested to release an amount Rs. 87.09 lakhs which includes the balance available out of Government of India release after release 1st quarter fund (Rs. 71.72 lakhs) + the unspent balance (Rs. 15.37 lakhs) released during last year.

3. This has been examined and hence this Order.

**Government Order No. HCD 51 HPP 2010, Bangalore, dated : 12-08-2010**

Government is pleased to release an amount of Rs. 87.09 lakhs (Rupees Eighty Seven Lakhs Nine Thousand only) to the Director of Horticulture under the "Scheme for integrated Farming in Coconut for Productivity Improvement in the State" during 2009-10 under the Head of Account 2401-00-108-2-35-100 (Financial Assistance/Relief).

2. This Order is issued as per the delegation of powers vested with Secretaries vide Government Order No. FD 1 TFP 2008 dated 16-05-2008 and concurrence by the Internal Financial Advisor, Agriculture and Horticulture Department vide Note No. ತೋಇ 23 ಆಂಆಸ 2010 dated : 09-08-2010.

By Order and in the name of the Governor of Karnataka

(**S. RAJU)**

P.R. No. 2184 Under Secretary to Government, Horticulture Department.

## ಇಂಧನ ಸಚಿವಾಲಯ

**ಸೇರ್ಪಡೆ**

ಸಂಖ್ಯೆ: ಇಎನ್ 376 ಎನ್‌ಸಿಇ 2007, ಬೆಂಗಳೂರು, ದಿನಾಂಕ : 10–08–2010

ಸರ್ಕಾರಿ ಆದೇಶ ಸಂಖ್ಯೆ: ಇಎನ್ 376 ಎನ್‌ಸಿಇ 2007 ದಿನಾಂಕ: 30–06–2009ರ ಆದೇಶ ಭಾಗದ ಮೊದಲನೆ ಕಂಡಿಕೆಯ ಮೂರನೇ ಸಾಲಿನಲ್ಲಿ 'ವಿದ್ಯುತ್ ಯೋಜನೆಯನ್ನು' ಎಂಬ ಪದದ ನಂತರ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು:–

"(Latitude : $12^0$ 34' 52" Longitude: $75^0$ 21' 10")"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಜಿ. ಸಂಪತ್ ಕುಮಾರ್)**

ಪಿಆರ್–2185 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ನಾಗರೀಕ ನೋಂದಣಿ ಪದ್ಧತಿಯಡಿ ತಾಲ್ಲೂಕು ಮಟ್ಟದ ಸಮನ್ವಯ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ

**ಓದಲಾಗಿದೆ :** 1) ಸರ್ಕಾದ ಆದೇಶ ಸಂಖ್ಯೆ. ಪಿಡಿಎಸ್ 179 ಎಸ್ಎಮ್ಸಿ 97, ಬೆಂಗಳೂರು, ದಿನಾಂಕ 8–1–1998.

* * *

**ಪ್ರಸ್ತಾವನೆ :**

ದೇಶದಲ್ಲಿ ಸಂಭವಿಸುವ ಪ್ರತಿಯೊಂದು ಜನನ, ಮರಣ ಮತ್ತು ನಿರ್ಜೀವ ಜನನ ನೋಂದಣಿಯು ಜನನ, ಮರಣ ನೋಂದಣಿ ಅಧಿನಿಯಮ 1969 ರನ್ವಯ ದೇಶಾದ್ಯಂತ ಕಡ್ಡಾಯಗೊಳಿಸಲಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಜನನ, ಮರಣ ನೋಂದಣಿಯು ಸುವ್ಯವಸ್ಥಿತವಾಗಿ ನಡೆಯಲು, ವಿವಿಧ ಇಲಾಖೆಗಳ ಸಮನ್ವಯತೆಯ ಅವಶ್ಯಕತೆ ಇರುತ್ತದೆ. ತಾಲ್ಲೂಕು ಮತ್ತು ಗ್ರಾಮ ಮಟ್ಟದಲ್ಲಿ ಜನನ, ಮರಣ ನೋಂದಣಿಯನ್ನು ಉತ್ತಮಪಡಿಸುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ ಕಆಖ 179 SMC 97, ಬೆಂಗಳೂರು, ದಿನಾಂಕ 8–1–1998 ರಲ್ಲಿ ತಾಲ್ಲೂಕು ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಲಾಗಿತ್ತು. ಅದರಲ್ಲಿ, ಆರೋಗ್ಯ, ಕಂದಾಯ ಹಾಗೂ ಪೌರಾಡಳಿತ ಇಲಾಖೆಗಳ ತಾಲ್ಲೂಕು ಮಟ್ಟದ ಅಧಿಕಾರಿಗಳನ್ನು ಸಮಿತಿ ಸಭೆಯ ಸದಸ್ಯರುಗಳನ್ನಾಗಿ ಸೇಮಕ ಮಾಡಲಾಗಿತ್ತು. ದಿನಾಂಕ 30–03–2009 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಅಂತರ ಇಲಾಖಾ ಸಮನ್ವಯ ಸಮಿತಿ ಸಭೆಯ ನಿರ್ಣಯ ಪ್ರಕಾರ ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಕ್ಕಳ ಅಭಿವೃದ್ಧಿ ಯೋಜನಾಧಿಕಾರಿಗಳನ್ನು (CDPO) ಈ ಸಮಿತಿಗೆ ಸದಸ್ಯರನ್ನಾಗಿ ನೇಮಕ ಮಾಡಲು ಸೂಚಿಸಲಾಗಿತ್ತು. ಆದರೆ, ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಕ್ಕಳ ಅಭಿವೃದ್ಧಿ ಯೋಜನಾಧಿಕಾರಿಗಳನ್ನು ಈ ಮೇಲ್ಕಂಡ ಸರ್ಕಾರಿ ಆದೇಶದಲ್ಲಿ ಸಮಿತಿಗೆ ಸದಸ್ಯರನ್ನಾಗಿ ಈಗಾಗಲೇ ನೇಮಕ ಮಾಡಲಾಗಿದೆ. ಜನನ, ಮರಣ, ನೋಂದಣಿ ಅಧಿನಿಯಮ, 1969ರ ಪ್ರಕರಣ 8 (ಸಿ) ಮತ್ತು 8 (ಇ) ಪ್ರಕಾರ ಪೊಲೀಸ್ ಇಲಾಖೆಯ ಅಧಿಕಾರಿಗಳು ಮಾಹಿತಿದಾರರಾಗಿರುವುದರಿಮದ ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಉನ್ನತಮಟ್ಟದ ಪೊಲೀಸ್ ಅಧಿಕಾರಿಯನ್ನು ಈ ಸಮಿತಿಗೆ ಸದಸ್ಯರನ್ನಾಗಿ ನೇಮಕ ಮಾಡಬೇಕಾಗಿರುತ್ತದೆ ಮತ್ತು ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆಲವೊಂದು ಇಲಾಖೆಯ ಅಧಿಕಾರಿಗಳ ಹುದ್ದೆಗಳ ಪದನಾಮಗಳು ಬದಲಾವಣೆಯಾಗಿರುವುದರಿಂದ, ಈ ಸಮಿತಿಯ ಸದಸ್ಯರುಗಳ ಪಟ್ಟಿಯಲ್ಲಿ ಸದಸ್ಯರುಗಳ ಹುದ್ದೆಗಳ ಪದನಾಮಗಳ ಬದಲಾವಣೆ ಮಾಡಿ ಸದರಿ ಸಮಿತಿಯನ್ನು ಪನರ್ರಚಿಸಲು ತೀರ್ಮಾನಿಸಿರುವುದರಿಂದ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಪಿಡಿ 162 ಎಸ್ಎಂಸಿ 2010 (3), ಬೆಂಗಳೂರು, ದಿನಾಂಕ 13ನೇ ಆಗಸ್ಟ್, 2010**

ಜನನ–ಮರಣ ನೋಂದಣಿ ಕುರಿತು ತಾಲ್ಲೂಕು ಮಟ್ಟದ ಸಮನ್ವಯ ಸಮಿತಿಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಅದೇಶದವರೆವಿಗೆ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಪುನರ್ರಚಿಸಿ ಆದೇಶಿದೆ.

| | | | |
|---|---|---|---|
| 1. | ತಹಶೀಲ್ದಾರರು | ... | ಅಧ್ಯಕ್ಷರು |
| 2. | ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | ... | ಸದಸ್ಯರು |
| 3. | ತಾಲ್ಲೂಕು ವೈದ್ಯಾಧಿಕಾರಿಗಳು | ... | ಸದಸ್ಯರು |
| 4. | ಕಂದಾಯ ನಿರೀಕ್ಷಕರು | ... | ಸದಸ್ಯರು |
| 5. | ಪುರಸಭೆಯ ಮುಖ್ಯಾಧಿಕಾರಿಗಳು | ... | ಸದಸ್ಯರು |
| 6. | ನಾಡಕಛೇರಿಗಳ ಉಪ ತಹಶೀಲ್ದಾರರು | ... | ಸದಸ್ಯರು |
| 7. | ಮಕ್ಕಳ ಅಭಿವೃದ್ಧಿ ಯೋಜನಾಧಿಕಾರಿಗಳು | ... | ಸದಸ್ಯರು |
| 8. | ಪೊಲೀಸ್ ಇಲಾಖೆಯ ತಾಲ್ಲೂಕು ಮುಖ್ಯಾಧಿಕಾರಿಗಳು | ... | ಸದಸ್ಯರು |
| 9. | ತಹಶೀಲ್ದಾರ ಕಛೇರಿಯ ಸಾಂಖ್ಯಿಕ ನಿರೀಕ್ಷಕರು | ... | ಸದಸ್ಯ– ಕಾರ್ಯದರ್ಶಿಗಳು |

ಈ ಸಮಿತಿಯು ಪ್ರತಿ ತಿಂಗಳಿಗೊಮ್ಮೆ ಸಭೆ ಸೇರಿ ಜನನ ಮರಣ ನೋಂದಣಿ ಕಾರ್ಯದ ಪ್ರಗತಿಯನ್ನು ಪರಿಶೀಲಿಸುವುದು ಹಾಗೂ ವರದಿಯನ್ನು ಮುಖ್ಯ ನೋಂದಣಾಧಿಕಾರಿಗಳ ಕಛೇರಿಗೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ವಿ. ಸಾಯಿಬಾಬಾ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ. (ಎಸ್–5)

ಪಿಆರ್–2186

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ನಾಗರೀಕ ನೋಂದಣಿ ಪದ್ಧತಿಯಡಿ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾದ ಆದೇಶ ಸಂಖ್ಯೆ. ಐಎಫ್‌ಎಸ್ 53 ಎಸ್‌ಎಮ್‌ಎಮ್ 94 ಬೆಂಗಳೂರು, ದಿನಾಂಕ: 13-5-1994.

* * *

**ಪ್ರಸ್ತಾವನೆ :**

ದೇಶದಲ್ಲಿ ಸಂಭವಿಸುವ ಪ್ರತಿಯೊಂದು ಜನನ, ಮರಣ ಮತ್ತು ನಿರ್ಜೀವ ಜನನ ನೋಂದಣಿಯು ಜನನ, ಮರಣ ನೋಂದಣಿ ಅಧಿನಿಯಮ 1969 ರನ್ವಯ ದೇಶಾದ್ಯಂತ ಕಡ್ಡಾಯಗೊಳಿಸಲಾಗಿದೆ. ಈ ಅಧಿನಿಯಮ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಪ್ರತಿಯೊಂದು ಜಿಲ್ಲೆಯ ಜಿಲ್ಲಾಧಿಕಾರಿಗಳು ಆಯಾ ಜಿಲ್ಲೆಗೆ ಜಿಲ್ಲಾ ಜನನ-ಮರಣ ನೋಂದಣಾಧಿಕಾರಿಗಳಾಗಿರುತ್ತಾರೆ. ಜಿಲ್ಲೆಯಲ್ಲಿ ಜನನ-ಮರಣ ನೋಂದಣಿಯು ಸುವ್ಯವಸ್ಥಿತವಾಗಿ ನಡೆಯಲು ಬೇರೆ ಬೇರೆ ಇಲಾಖೆಗಳ ಸಮನ್ವಯದ ಅವಶ್ಯಕತೆ ಇರುತ್ತದೆ. ಜಿಲ್ಲೆಯಲ್ಲಿ ಜನನ-ಮರಣ ನೋಂದಣಿಯನ್ನು ಉತ್ತಮಪಡಿಸುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ. IFS 53 SMM 94, ಬೆಂಗಳೂರು, ದಿನಾಂಕ 13-05-1994 ರಲ್ಲಿ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಲಾಗಿತ್ತು. ಅದರಲ್ಲಿ ಆರೋಗ್ಯ ಕಂದಾಯ, ವಾರ್ತಾ ಮತ್ತು ಪ್ರಚಾರ ಹಾಗೂ ಪೌರಾಡಳಿತ ಇಲಾಖೆಗಳ ಜಿಲ್ಲಾಮಟ್ಟದ ಅಧಿಕಾರಿಗಳನ್ನು ಸದರಿ ಸಮಿತಿಯ ಸದಸ್ಯರುಗಳನ್ನಾಗಿ ನೇಮಕ ಮಾಡಲಾಗಿತ್ತು. ದಿನಾಂಕ 30-03-2009 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಅಂತರ ಇಲಾಖಾ ಸಮನ್ವಯ ಸಮಿತಿ ಸಭೆಯ ನಿರ್ಣಯದ ಪ್ರಕಾರ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪ ನಿರ್ದೇಶಕರನ್ನು ಸದಸ್ಯರನ್ನಾಗಿ ನೇಮಕ ಮಾಡಲು ಸೂಚಿಸಿರುವುದರಿಂದ ಮತ್ತು ಜನನ-ಮರಣ ನೋಂದಣಿ ಅಧಿನಿಯಮ, 1969 ರ ಪ್ರಕರಣ 8 (ಸಿ) ಮತ್ತು 8 (ಇ) ಪ್ರಕಾರ ಪೊಲೀಸ್ ಇಲಾಖೆಯ ಅಧಿಕಾರಿಗಳು ಮಾಹಿತಿದಾರರಾಗಿರುವುದರಿಂದ, ಜಿಲ್ಲಾ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಉನ್ನತ ಮಟ್ಟದ ಪೊಲೀಸ್ ಅಧಿಕಾರಿಯನ್ನು ಸದರಿ ಸಮಿತಿಗೆ ಸದಸ್ಯರನ್ನಾಗಿ ನೇಮಕ ಮಾಡಬೇಕಾಗಿರುತ್ತದೆ. ಮತ್ತು ಜಿಲ್ಲಾ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆಲವೊಂದು ಇಲಾಖೆಯ ಅಧಿಕಾರಿಗಳ ಹುದ್ದೆಗಳ ಪದನಾಮಗಳು ಬದಲಾವಣೆಯಾಗಿವುದರಿಂದ ಈ ಸಮಿತಿಯ ಸದಸ್ಯರುಗಳ ಪಟ್ಟಿಯಲ್ಲಿ ಸದಸ್ಯರುಗಳ ಹುದ್ದೆಗಳ ಪದನಾಮಗಳನ್ನು ಬದಲಾವಣೆ ಮಾಡಿ ಸದರಿ ಸಮಿತಿಯನ್ನು ಕೆಳಕಂಡಂತೆ ಪುನರ್ ರಚಿಸಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಪಿಡಿ 162 ಎಸ್‌ಎಂಸಿ 2010 (2), ಬೆಂಗಳೂರು, ದಿನಾಂಕ 13ನೇ ಆಗಸ್ಟ್, 2010**

ಜನನ-ಮರಣ ನೋಂದಣಿ ಕುರಿತು ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ಕೆಳಕಂಡ ಸದಸ್ಯರನ್ನೊಳಗೊಂಡಂತೆ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಅದೇಶದವರೆವಿಗೆ ಪುನರ್‌ರಚಿಸಿ ಆದೇಶಿದೆ.

1. ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಜನನ-ಮರಣ ನೋಂದಣಾಧಿಕಾರಿಗಳು ... ಅಧ್ಯಕ್ಷರು
2. ಅಪರ ಜಿಲ್ಲಾಧಿಕಾರಿಗಳು ... ಸದಸ್ಯರು
3. ಉಪ ಕಾರ್ಯದರ್ಶಿಗಳು (ಅಭಿವೃದ್ಧಿ) ಜಿಲ್ಲಾ ಪಂಚಾಯತ್ ... ಸದಸ್ಯರು
4. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ... ಸದಸ್ಯರು
5. ಜಿಲ್ಲಾ ವಾರ್ತಾ ಮತ್ತು ಪ್ರಚಾರ ಅಧಿಕಾರಿಗಳು ... ಸದಸ್ಯರು
6. ಎಲ್ಲಾ ಕಂದಾಯ ವಿಭಾಗದ ಸಹಾಯಕ ಆಯುಕ್ತರುಗಳು ... ಸದಸ್ಯರು
7. ಎಲ್ಲಾ ಸ್ಥಳೀಯ ಸಂಸ್ಥೆಗಳ ಆಯುಕ್ತರು/ ಮುಖ್ಯಾಧಿಕಾರಿಗಳು ... ಸದಸ್ಯರು
8. ಮುನಿಸಿಪಲ್ ತಹಶೀಲ್ದಾರರು ... ಸದಸ್ಯರು
9. ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ... ಸದಸ್ಯರು
10. ಪೊಲೀಸ್ ಇಲಾಖೆಯ ಜಿಲ್ಲಾ ಮುಖ್ಯಾಧಿಕಾರಿಗಳು ... ಸದಸ್ಯರು
11. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಅಪರ ಜಿಲ್ಲಾ ಜನನ-ಮರಣ ನೋಂದಣಾಧಿಕಾರಿಗಳು ... ಸದಸ್ಯ- ಕಾರ್ಯದರ್ಶಿಗಳು

ಈ ಸಮಿತಿಯು ಪ್ರತಿ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ಜನನ ಮರಣ ನೋಂದಣಿ ಕಾರ್ಯದ ಪ್ರಗತಿಯನ್ನು ಪರಿಶೀಲಿಸುವುದು ಹಾಗೂ ವರದಿಯನ್ನು ಮುಖ್ಯ ನೋಂದಣಾಧಿಕಾರಿಗಳ ಕಛೇರಿಗೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ವಿ. ಸಾಯಿಬಾಬಾ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ. (ಎಸ್-5)

ಪಿಆರ್-2187

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರತಿಭೆ ಪ್ರದರ್ಶಿಸುವ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನವಾಗಿ ಅನುದಾನ ಬಿಡುಗಡೆಗೆ ಸಮಿತಿ ರಚಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಪ್ರಸ್ತಾವನೆ :**

ಅಂತರರಾಷ್ಟ್ರೀಯ ಮಟ್ಟದಲ್ಲಿ ಬಾಹ್ಯಾಕಾಶ ವಿಜ್ಞಾನ ಸಮಾವೇಶ ಮತ್ತು ಕಾರ್ಯಾಗಾರದಲ್ಲಿ ಪ್ರತಿಭಾನ್ವಿತ ವಿದ್ಯಾರ್ಥಿಗಳು ಭಾಗವಹಿಸಲು ಅಂತರರಾಷ್ಟ್ರೀಯ ಸಂಸ್ಥೆಗಳು ವಿದ್ಯಾರ್ಥಿಗಳ ಊಟ ವಸತಿ, ಇತ್ಯಾದಿ ವೆಚ್ಚಗಳನ್ನು ಭರಿಸುವವರಿರುತ್ತಾರೆ. ಆದರೆ, ವಿದೇಶ ಪ್ರಯಾಣದ ವೆಚ್ಚವನ್ನು ವಿದ್ಯಾರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಭರಿಸಲು ಕಷ್ಟಸಾಧ್ಯವಾಗುತ್ತದೆ. ಇಂತಹ ಪ್ರತಿಭಾನ್ವಿತ ವಿದ್ಯಾರ್ಥಿಗಳು ರಾಜ್ಯ ಸರ್ಕಾರದ ಸಹಾಯಾನುದಾನವನ್ನು ಅಪೇಕ್ಷಿಸಿ ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸಿರುತ್ತಾರೆ.

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ಇಂತಹ ಮನವಿಗಳನ್ನು ಪುರಸ್ಕರಿಸಲು ಯೋಜನೆಗಳು ರೂಪಿತವಾಗದ ಕಾರಣ ಹಾಗೂ ಇಲಾಖೆಗೆ ಪ್ರತ್ಯೇಕ ನಿರ್ದೇಶನಾಲಯ ಇಲ್ಲದಿರುವುದು ಹಾಗೂ ಇಲಾಖೆಯ ಹಾಲಿ ಅನುದಾನಿತ ಸಂಸ್ಥೆಗಳು ಸಹಾ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲು ಮುಂದೆ ಬರುತ್ತಿಲ್ಲದ ಕಾರಣ ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾಗವಹಿಸುವ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಅನೇಕ ತೊಂದರೆಗಳು ಹಾಗೂ ಈ ಅವಕಾಶದಿಂದ ವಂಚಿತರಾಗುವ ಸಂದರ್ಭಗಳು ಉಂಟಾಗಿರುತ್ತವೆ.

ಮೇಲಿನ ಪರಿಸ್ಥಿತಿಯನ್ನು ಮನಗಂಡ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯು ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರತಿಭೆಯನ್ನು ಪ್ರದರ್ಶಿಸಲು ಆಯ್ಕೆಗೊಂಡ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಇಲಾಖೆ ಮತ್ತು ಉನ್ನತ ಶಿಕ್ಷಣ ಇಲಾಖೆಗೆ ಒಳಪಡುವ ಎಲ್ಲಾ ವಿಜ್ಞಾನ ವಿದ್ಯಾರ್ಥಿಗಳ ವಿದೇಶ ಪ್ರಯಾಣ ವೆಚ್ಚವನ್ನು ಭರಿಸಲು ಅವಕಾಶ ನೀಡುವ ಸಲುವಾಗಿ ಒಂದು ವಿಶೇಷ ಯೋಜನೆಯನ್ನು ರೂಪಿಸುವ ಸಲುವಾಗಿ ಒಂದು ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ.

ರಾಜ್ಯದ ಯಾವುದೇ ಶಾಲೆ, ಪ್ರೌಢಶಾಲೆ, ಕಾಲೇಜು, ಪದವಿ, ಇಂಜಿನಿಯರಿಂಗ್ ಹಾಗೂ ವಿಶ್ವವಿದ್ಯಾನಿಲಯಗಳಲ್ಲಿ ವಿಜ್ಞಾನ ವಿಷಯದಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಕ್ಷಮತೆಯನ್ನು ಪರಿಗಣಿಸಿ, ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದ ಅಂತರರಾಷ್ಟ್ರೀಯ ಮಟ್ಟದ ಸಮ್ಮೇಳನ, ಕಾರ್ಯಾಗಾರ/ಸ್ಪರ್ಧೆಯಲ್ಲಿ ಭಾಗವಹಿಸಲು ಆಹ್ವಾನ ನೀಡಿದ ಪಕ್ಷದಲ್ಲಿ, ಅಂತಹ ವಿದ್ಯಾರ್ಥಿಗಳಿಗೆ ಸಮ್ಮೇಳನ, ಕಾರ್ಯಾಗಾರ/ಸ್ಪರ್ಧೆಯಲ್ಲಿ ಭಾವಹಿಸಲು ಪ್ರಯಾಣ ವೆಚ್ಚ, ದಿನ ಭತ್ಯೆ ಹಾಗೂ ಇನ್ನಿತರೆ ಖರ್ಚು–ವೆಚ್ಚಗಳನ್ನು ಭರಿಸುವ ಬಗೆಗಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಅನುದಾನಕ್ಕೆ ಶಿಫಾರಸ್ಸು ಮಾಡಲು ಒಂದು ಸಮಿತಿಯನ್ನು ರಚಿಸಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಿಯಇ 26 ವಿತ್ರಮ 2010 (ಭಾ2) ಬೆಂಗಳೂರು, ದಿನಾಂಕ: 26–08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಇಲಾಖೆ ಮತ್ತು ಉನ್ನತ ಶಿಕ್ಷಣ ಇಲಾಖೆಗೆ ಒಳಪಡುವ ರಾಜ್ಯದ ಯಾವುದೇ ಶಾಲೆ, ಪ್ರೌಢಶಾಲೆ, ಕಾಲೇಜು, ಪದವಿ, ಇಂಜಿನಿಯರಿಂಗ್ ಹಾಗೂ ವಿಶ್ವವಿದ್ಯಾನಿಲಯಗಳಲ್ಲಿ ವಿಜ್ಞಾನ ವಿಷಯವನ್ನು ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಕ್ಷಮತೆಯನ್ನು ಪರಿಗಣಿಸಿ, ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದ ಅಂತರರಾಷ್ಟ್ರೀಯ ಮಟ್ಟದ ಸಮ್ಮೇಳನ, ಕಾರ್ಯಾಗಾರ/ಸ್ಪರ್ಧೆಯಲ್ಲಿ ಭಾಗವಹಿಸಲು ಆಹ್ವಾನ ನೀಡಿದ ಪಕ್ಷದಲ್ಲಿ, ಅಂತಹ ವಿದ್ಯಾರ್ಥಿಗಳಿಗೆ ಸಮ್ಮೇಳನ, ಕಾರ್ಯಾಗಾರ/ಸ್ಪರ್ಧೆಯಲ್ಲಿ ಭಾಗವಹಿಸಲು ಪ್ರಯಾಣ ಭತ್ಯೆ, ದಿನ ಭತ್ಯೆ ಹಾಗೂ ಇನ್ನಿತರೆ ಖರ್ಚು–ವೆಚ್ಚಗಳ ಬಗ್ಗೆ ಕೋರಿ ಬರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಸರ್ಕಾರದಿಂದ ಅನುದಾನ ಬಿಡುಗಡೆಗೆ ಶಿಫಾರಸ್ಸು ಮಾಡಲು ಷರತ್ತು ಮತ್ತು ಅನುಷ್ಠಾನದ ರೂಪುರೇಷೆಗೊಳಪಟ್ಟು ಕೆಳಕಂಡ ಒಂದು ಸಮಿತಿಯನ್ನು ರಚಿಸಿ, ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

**ಷರತ್ತು ಮತ್ತು ಅನುಷ್ಠಾನದ ರೂಪುರೇಷೆಗಳು :–**

1. ರಾಜ್ಯದಾದ್ಯಂತ ಪ್ರಕಟಣೆಯ ಮೂಲಕ ವಿಜ್ಞಾನ ವಿಷಯದಲ್ಲಿ ವ್ಯಾಸಂಗ ಮಾಡುತ್ತಿರುವ ಅರ್ಹ ವಿದ್ಯಾರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗುವುದು.
2. ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾಗವಹಿಸಲು ಬಂದಿರುವ ಆಹ್ವಾನ ಪತ್ರದೊಂದಿಗೆ ವ್ಯಾಸಂಗ ಮಾಡುತ್ತಿರುವ ವಿದ್ಯಾಸಂಸ್ಥೆಯ ಮುಖ್ಯಸ್ಥರ ಮುಖಾಂತರ ಭರಿಸಬೇಕಾದ ಅನುದಾನದ ವಿವರಗಳೊಂದಿಗೆ ಕೋರಿ ವರ್ಷದ ಯಾವುದೇ ಸಮಯದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಲಾದ ಉಪ ಸಮಿತಿಯು ಇಲಾಖೆಯು ಸ್ವೀಕರಿಸಿ ಸಲ್ಲಿಸಿದ ಅರ್ಜಿಗಳನ್ನು ಕೂಡಲೇ ಪರಿಶೀಲಿಸಿ ಅನುದಾನದ ಮೊತ್ತವನ್ನು ನಿರ್ಧರಿಸಿ ಸರ್ಕಾರಕ್ಕೆ ಶಿಫಾರಸ್ಸು ಮಾಡತಕ್ಕದ್ದು.
4. ಅನುದಾನ ಪಡೆದ ವಿದ್ಯಾರ್ಥಿಯು ಅಂತರರಾಷ್ಟ್ರೀಯ ಮಟ್ಟದ ಸಮ್ಮೇಳನ, ಕಾರ್ಯಾಗಾರ/ಸ್ಪರ್ಧೆಯಲ್ಲಿ ಭಾಗವಹಿಸಿ ಹಿಂತಿರುಗಿ ಬಂದ ನಂತರ ಖರ್ಚು ವೆಚ್ಚಗಳು ವಿವರಗಳನ್ನು ತಪ್ಪದೇ ಇಲಾಖೆ ಸಲ್ಲಿಸತಕ್ಕದ್ದು.

5. ಈ ಯೋಜನೆಯಡಿ ಒಬ್ಬ ವಿದ್ಯಾರ್ಥಿಗೆ ವಿದೇಶಿ ಪ್ರಯಾಣದ ಅವಶ್ಯಕತೆಗಳಿಗೆ ಅನುಗುಣವಾಗಿ ರೂ. 1.00 ಲಕ್ಷದ ಮಿತಿಗೊಳಪಟ್ಟು ವಾರ್ಷಿಕವಾಗಿ 5 ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡಲಾಗುವುದು.

**ಸಮಿತಿಯಲ್ಲಿರುವ ಅಧ್ಯಕ್ಷರು/ಸದಸ್ಯರು ಹಾಗೂ ಸದಸ್ಯ-ಕಾರ್ಯದರ್ಶಿ :-**

| | | |
|---|---|---|
| 1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ | – | ಅಧ್ಯಕ್ಷರು |
| 2. ವಿಶೇಷಾಧಿಕಾರಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ | – | ಸದಸ್ಯರು |
| 3. ಸದಸ್ಯ-ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ | – | ಸದಸ್ಯರು |
| 4. ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ | – | ಸದಸ್ಯರು |
| 5. ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ | – | ಸದಸ್ಯರು |
| 6. ನಿರ್ದೇಶಕರು, ಜವಾಹರ್‌ಲಾಲ್ ನೆಹರು ತಾರಾಲಯ | – | ಸದಸ್ಯರು |
| 7. ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು | – | ಸದಸ್ಯರು |
| 8. ಉಪ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ | – | ಸದಸ್ಯ-ಕಾರ್ಯದರ್ಶಿ |

ಈ ಯೋಜನೆಗೆ ತಗಲುವ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ : 3425-60-200-0-01(101) (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಎಫ್‌ಡಿ 134 ವೆಚ್ಚ-2, 10 ದಿ.4.5.2010 ಮತ್ತು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ.ಯೋಇ 77 ಜಶ 2010 ದಿ.23-7-2010ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.2326

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಖಾಸಗಿ ಸಹ-ಭಾಗಿತ್ವದೊಂದಿಗೆ ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಕೇಂದ್ರ ಸರ್ಕಾರದ ಪ್ರವಾಸೋದ್ಯಮ ಮತ್ತು ಸಂಸ್ಕೃತಿ ಮಂತ್ರಾಲಯದ ಅಧೀನ ಕಾರ್ಯದರ್ಶಿರವರ ಪತ್ರ ಸಂಖ್ಯೆ: ಎಫ್. 11-1-2008 ಎಂ. II ದಿ. 31-7-2009.

**ಪ್ರಸ್ತಾವನೆ :**

ಭಾರತ ಸರ್ಕಾರದ ಪ್ರವಾಸೋದ್ಯಮ ಮತ್ತು ಸಂಸ್ಕೃತಿ ಮಂತ್ರಾಲಯವು ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಆಗುತ್ತಿರುವ ಬೆಳವಣಿಗೆಗಳು, ಉದ್ಯಮ, ಜನಕಲ್ಯಾಣ ಮತ್ತು ಪರಿಸರದ ಕ್ಷೇತ್ರದಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸುವಂತಹ ಉದ್ದೇಶದಿಂದ ವಿಜ್ಞಾನ ನಗರಗಳು, ಪ್ರಾದೇಶಿಕ ವಿಜ್ಞಾನ ಕೇಂದ್ರಗಳು ಮತ್ತು ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸುವ ಒಂದು ಯೋಜನೆಯನ್ನು ರೂಪಿಸಿ, ಮಾರ್ಗಸೂಚಿ ಹೊರಡಿಸಿದೆ. ಈ ಬಗ್ಗೆ ಕೇಂದ್ರ ಸರ್ಕಾರದ ಅಂಗ ಸಂಸ್ಥೆಯಾದ National Council for Science Museum (NCSM), ಕೊಲ್ಕತ್ತ ಸಂಸ್ಥೆಯು ಒಂದು ಪರಿಷ್ಕೃತ ಮಾರ್ಗಸೂಚಿಯನ್ನು ಹೊರಡಿಸಿ, ಈ ಮಾರ್ಗಸೂಚಿಯನ್ವಯ 5 ಎಕರೆ ಜಮೀನಿನಲ್ಲಿ 2.60 ಕೋಟಿ ವೆಚ್ಚದಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರದ 50 : 50 ಅನುಪಾತದಲ್ಲಿ ವೆಚ್ಚವನ್ನು ಭರಿಸುವ ಮೂಲಕ ಸ್ಥಾಪಿಸಬೇಕಾಗಿರುತ್ತದೆ.

ರಾಜ್ಯದಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸಲು ರಾಯಚೂರು, ತುಮಕೂರು, ಹಾವೇರಿ, ಹಾಸನ, ಶಿವಮೊಗ್ಗ, ಬೆಳಗಾಂ ಮತ್ತು ಬಳ್ಳಾರಿ, ಉತ್ತರ ಕನ್ನಡ, ಕೊಡಗು ಮತ್ತು ಬೀದರ್ ಜಿಲ್ಲೆಗಳಲ್ಲಿ ರಾಜ್ಯದ ಪಾಲಿನ ಮೊತ್ತ ತಲಾ ರೂ. 1.00 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಿ, ಕೇಂದ್ರ ಸರ್ಕಾರದ ಪಾಲಿನ ಮೊತ್ತ ರೂ. 1.30 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದಾಗ

ಕೇಂದ್ರ ಸರ್ಕಾರದ ಅಂಗ ಸಂಸ್ಥೆಯಾದ NCSM ಸಂಸ್ಥೆಯು ಆರ್ಥಿಕ ಮುಗ್ಗಟ್ಟಿನಿಂದಾಗಿ 11ನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಹಾವೇರಿ ಮತ್ತು ತುಮಕೂರು ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳಿಗೆ ಮಾತ್ರ ಅನುಮೋದನೆ ನೀಡುವುದಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ತಿಳಿಸಿರುತ್ತದೆ.

ರಾಜ್ಯ ಸರ್ಕಾರವು ಮೇಲೆ ತಿಳಿಸಿದ 8 ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸಲು ತಲಾ ರೂ. 1.00 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದ್ದು, ಈ ಮೊತ್ತವು ಕೇಂದ್ರ ಸರ್ಕಾರದ ಸಹಾಯಾನುದಾನ ದೊರಕದ ಕಾರಣ, ಯಾವುದೇ ಪ್ರಗತಿ ಇಲ್ಲದೇ ಜಿಲ್ಲಾಧಿಕಾರಿಗಳ ಅಧೀನದಲ್ಲಿಯೇ ಉಳಿದಿರುತ್ತದೆ.

ಕೇಂದ್ರ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡಲು ಸಾಧ್ಯವಿಲ್ಲವೆಂದು ತಿಳಿಸಿರುವ ಮೇರೆಗೆ ರಾಜ್ಯ ಸರ್ಕಾರದ ಪಾಲಿನೊಂದಿಗೆ ಸ್ಥಳೀಯ ಸಂಪನ್ಮೂಲಗಳಿಂದ ಹಾಗೂ ಖಾಸಗಿ ವಂತಿಗೆಯವರಿಂದ ಧನ ಸಂಗ್ರಹಿಸಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಮಾತ್ರ ಸ್ಥಾಪಿಸಲು ಮುಂದೆ ಬರುವ ಸಂಸ್ಥೆಗಳ ಕೋರಿಕೆಯನ್ನು ಪರಿಗಣಿಸಲು ಸಾರ್ವಜನಿಕ/ಖಾಸಗಿ ಸಹಭಾಗಿತ್ವದೊಂದಿಗೆ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸಲು ಒಂದು ಸಮಗ್ರ ಯೋಜನೆಯನ್ನು ರೂಪಿಸುವ ಅವಶ್ಯಕತೆಯಿದೆ. ಈ ಯೋಜನೆಯನ್ನು ಕೇಂದ್ರ ಸರ್ಕಾರದ NCSM ಕೊಲ್ಕತ್ತ ಸಂಸ್ಥೆಯು ರೂಪಿಸಿರುವ ಪರಿಷ್ಕೃತ ಮಾರ್ಗಸೂಚಿಯ ಚೌಕಟ್ಟಿನಲ್ಲಿ ಸ್ಥಾಪಿಸಬಹುದಾಗಿದ್ದು ಈ ಕೆಳಗಿನ ಆರ್ಥಿಕ ವ್ಯವಸ್ಥೆಯೊಂದಿಗೆ ಈ ಯೋಜನೆಯನ್ನು ಕಾರ್ಯಗತಗೊಳಿಸಬಹುದಾಗಿದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಿಯಇ 26 ವಿತ್ರಮ 2010 (ಭಾ 1) ಬೆಂಗಳೂರು, ದಿನಾಂಕ: 26–08–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಈಗಾಗಲೇ ರಾಜ್ಯದ ಪಾಲಿನ ಶೇಕಡ 50 ರಷ್ಟು ಅನುದಾನವನ್ನು ಬಿಡುಗಡೆ ಮಾಡಿ ಅರ್ಧಕ್ಕೆ ನಿಂತಿರುವ 8 ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಕೆಳಗಿನಂತೆ ಆರ್ಥಿಕ ಸಹಾಯ ಧನದೊಂದಿಗೆ ಮತ್ತು ಕೆಳಕಂಡ ಷರತ್ತು ಹಾಗೂ ನಿಬಂಧನೆಗಳಿಗೆ ಒಳಪಟ್ಟು ಪೂರ್ಣಗೊಳಿಸಲು ಸರ್ಕಾರವು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

1. ರಾಜ್ಯ ಸರ್ಕಾರದ ಸಹಾಯ ಧನ – 50%– ರೂ. 130.00 ಲಕ್ಷಗಳು
2. ಖಾಸಗಿ/ಸ್ಥಳೀಯ ವಂತಿಕೆ – 50%– ರೂ. 130.00 ಲಕ್ಷಗಳು

(ವಿಷನ್ ಗ್ರೂಪ್ ನಿಂದ ಒದಗಿಸಲಾಗುವ ಅನುದಾನವು ಸೇರಿದಂತೆ)

**ಒಟ್ಟು ಮೊತ್ತ – ರೂ. 260.00 ಲಕ್ಷಗಳು**

3. ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳ ಕಟ್ಟಡ ನಿರ್ಮಾಣವನ್ನು ಎನ್.ಸಿ.ಎಸ್.ಎಮ್.ಕೊಲ್ಕತ್ತ ಇವರ ವಿನ್ಯಾಸದನ್ವಯ ಹಾಗೂ ಪರಿಷ್ಕೃತ ಮಾರ್ಗಸೂಚಿಯಂತೆ ನಿರ್ಮಿಸತಕ್ಕದ್ದು.
4. ಈ ಯೋಜನೆಯ ಅನುಷ್ಠಾನವನ್ನು ಜಿಲ್ಲಾಧಿಕಾರಿರವರ ಅಧ್ಯಕ್ಷತೆಯಲ್ಲಿ ರಚಿಸಲಾದ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರದ ಸೊಸೈಟಿ ವತಿಯಿಂದ ಕೈಗೊಳ್ಳತಕ್ಕದ್ದು.
5. ಈ ಕೇಂದ್ರದ ಅಧ್ಯಕ್ಷರಾದ ಜಿಲ್ಲಾಧಿಕಾರಿಗಳು ರೂ. 130.00 ಲಕ್ಷಗಳನ್ನು ಸ್ಥಳೀಯ ಸಂಪನ್ಮೂಲಗಳಿಂದ ಹಾಗೂ ಖಾಸಗಿಯವರಿಂದ ವಂತಿಗೆ ಮೂಲಕ ಕ್ರೋಢೀಕರಿಸತಕ್ಕದ್ದು.
6. ಈ ಕೇಂದ್ರಗಳು ಸ್ಥಳೀಯ ಸಂಪನ್ಮೂಲಗಳಿಂದ ಹಾಗೂ ಖಾಸಗಿಯವರಿಂದ ವಂತಿಗೆ ಪಡೆದುಕೊಂಡು ನಂತರ ರಾಜ್ಯ ಸರ್ಕಾರ ಬಿಡುಗಡೆ ಮಾಡಿರುವ ಅನುದಾನದೊಂದಿಗೆ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರದ ಕಟ್ಟಡ ಕಾರ್ಯವನ್ನು ಪೂರ್ಣಗೊಳಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 134 ವೆಚ್ಚ–2, 10 ದಿನಾಂಕ 4–5–2010 ಮತ್ತು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ ಯೋಇ 77 ಜಶ 2010 ದಿನಾಂಕ 23–7–2010ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2327

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ, ರಾಣೇಬೆನ್ನೂರು ತಾಲ್ಲೂಕು ನದಿಹರಳಹಳ್ಳಿ ಮತ್ತು ಹೂಲಿಕಟ್ಟೆ ಏತ ನೀರಾವರಿ ಯೋಜನೆ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ (ಉ) ವ/ಬಿಜಾ/ಭೂಸ್ವಾಪ್ರ/2009-10/3323, ದಿನಾಂಕ: 07-06--2010.

**ಪ್ರಸ್ತಾವನೆ :**

ಹಾವೇರಿ ಜಿಲ್ಲೆ, ರಾಣೇಬೆನ್ನೂರು ತಾಲ್ಲೂಕು ನದಿಹರಳಹಳ್ಳಿ ಮತ್ತು ಹೂಲಿಕಟ್ಟೆ ಏತ ನೀರಾವರಿ ಯೋಜನೆ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ನದಿಹರಳಹಳ್ಳಿ ಮತ್ತು ಹೂಲಿಕಟ್ಟೆ ಗ್ರಾಮಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ರಾಣೇಬೆನ್ನೂರು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ)ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ : 07-06-2010 ರ ಪತ್ರದಲ್ಲಿ ಕೋರಿರುತ್ತಾರೆ. ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿವೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4 (1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 10-09-1992.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 11(ಎ)ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ : 31-03-1994.

ಭೂಸ್ವಾಧೀನಕ್ಕೊಳಪಟ್ಟ ನದಿಹರಳಹಳ್ಳಿ ಮತ್ತು ಹೂಲಿಕಟ್ಟೆ ಗ್ರಾಮಗಳ ಜನೀನುಗಳಿಗೆ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಹಣ ಪಡೆದು ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ 1894ರ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ರಾಣೇಬೆನ್ನೂರು ಇಲ್ಲಿ ಪ್ರಕರಣಗಳನ್ನು ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ : 09-04-2009 ರಂದು ನೀಡಿದ ತೀರ್ಪಿನಲ್ಲಿ ಹೆಚ್ಚಿನ ಪರಿಹಾರ ನೀಡುವಂತೆ ಆದೇಶಿಸಿರುತ್ತದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ : ಆರ್ ಡಿ 602 ಎಲ್ ಎಸಿ(ಎಲ್ ಸಿ) 2007, ದಿನಾಂಕ : 31-01-2008 ರಂದು ಅಭಿಪ್ರಾಯ ನೀಡಿರುತ್ತದೆ.

ನ್ಯಾಯಾಲಯವು ಹೆಚ್ಚುವರಿ ಪರಿಹಾರಕ್ಕೆ ತೀರ್ಪು ನೀಡಿರುವ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಎಲ್.ಎ.ಸಿ. ಸಂಖ್ಯೆ | ನದಿಹರಳಹಳ್ಳಿ ಮತ್ತು ಹೂಲಿಕಟ್ಟೆ ಗ್ರಾಮಗಳ ಸರ್ವೆ ನಂಬರ್ | ವಿಸ್ತೀರ್ಣ ಎ-ಗುಂ | ಪರಿಹಾರ ಧನದ ಮೊತ್ತ |
|---|---|---|---|---|
| 1 | 20/95 | 20/2 | 0-04 | 25260 |
| 2 | 21/95 | 41/5 | 0-01 | 5534 |
| 3 | 22/95 | 36/3ಬಿ | 0-02 | 11067 |
| 4 | 23/95 | 36/1+2 | 0-06 | 33199 |
| 5 | 24/95 | 48/2ಬಿ | 0-02 | 11067 |
| 6 | 25/95 | 48/1+2ಎ, 49/3ಬಿ | 0-05, 0-02 | 38733 |
| 7 | 26/95 | 49/1+2 | 0-04 | 22134 |
| 8 | 27/95 | 44/5ಬಿ | 0-01 | 5534 |
| 9 | 28/95 | 43/2 | 0-04 | 22134 |
| 10 | 29/95 | 42/5 | 0-07 | 38734 |
| 11 | 30/95 | 37/2 | 1-23 | 348579 |
| ಒಟ್ಟು | | | | **561975** |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 83 ಭೂಸ್ವಾಪ್ರ 2010, ಬೆಂಗಳೂರು ದಿನಾಂಕ : 26–08–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಹಾವೇರಿ ಜಿಲ್ಲೆ, ರಾಣೇಬೆನ್ನೂರು ತಾಲ್ಲೂಕು ನದಿಹರಳಹಳ್ಳಿ ಮತ್ತು ಹೂಲಿಕಟ್ಟೆ ಏತ ನೀರಾವರಿ ಯೋಜನೆ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ನದಿಹರಳಹಳ್ಳಿ ಮತ್ತು ಹೂಲಿಕಟ್ಟೆ ಗ್ರಾಮಗಳಿಗೆ ಸೇರಿದ ಪ್ರಸ್ತಾಪಿತ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯ ಅನುಸಾರ ಲೆಕ್ಕಹಾಕಿ ಪರಿಹಾರ ಮೊತ್ತ ರೂ. 5,61,975–00 (ಐದು ಲಕ್ಷದ ಅರವತ್ತೊಂದು ಸಾವಿರದ ಒಂಭೈನೂರ ಎಪ್ಪತ್ತೈದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್ ಡಿ 01 ಟಿಎಫ್‌ಪಿ 2008, ದಿನಾಂಕ : 16–05–2008 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2328

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ

(ಸಣ್ಣ ನೀರಾವರಿ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಆದಿರಾಜು, ಮಾಜಿ ಹೆಚ್.ಸಿ., ಡಿ.ಜಿ. ಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ : 73/ಡಿಇ1/ಆರ್6/2006, ದಿನಾಂಕ 30–03–2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ : ಸಿಬಿ (8) 14/2009–10 ದಿನಾಂಕ 01–09–2009.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 07–10–2009.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ಸಿಬಿ (8)14/2009–10 ದಿನಾಂಕ 06–01–2010.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್ ಸಿ 72 ಸಿಎನ್ ಎಸ್ 10 ದಿನಾಂಕ : 16–08–10.

**ಪ್ರಸ್ತಾವನೆ :**

ಶ್ರೀ ಆದಿರಾಜು ಇವರು ಮಡಿವಾಳ ಪೊಲೀಸ್ ಠಾಣೆಯಲ್ಲಿ ಹೆಡ್‌ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿರುವಾಗ ಕರ್ತವ್ಯದಲ್ಲಿ ತೀವ್ರ ಸ್ವರೂಪದ ಬೇಜವಾಬ್ದಾರಿತನ, ಕರ್ತವ್ಯಲೋಪ ಪ್ರದರ್ಶಿಸಿದ ಕಾರಣದ ಮೇಲೆ ಇತರೇ ಮೂವರು ಅಧಿಕಾರಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ 8ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಮಡಿವಾಳ ಪೊಲೀಸ್ ಠಾಣೆಯ ಮುಖ್ಯ ಪೇದೆ–440, ಆದಿರಾಜುರವರಾದ ನೀವು ದಿನಾಂಕ : 03–08–2006ರಂದು ಠಾಣೆಯಲ್ಲಿ ಯು.ಡಿ.ಆರ್. ಪ್ರಕರಣಗಳ ತನಿಖೆ ಕಾರ್ಯಕ್ಕೆ ನೇಮಕಗೊಂಡಿರುತ್ತೀರಿ.

ಅಂದು 17–55 ಗಂಟೆಗೆ ನಿಮ್ಮ ಠಾಣೆಯ ಸರಹದ್ದಿನ ಕಾಸಿಯ ಲಾಡ್ಜ್‌ನ ನಜೀಬ್ ಎಂಬುವವರು ಮೃತ ವ್ಯಕ್ತಿಯೊಬ್ಬನ ಶರೀರವೊಂದು ತಮ್ಮ ಹೋಟೆಲ್‌ನ ಪರಿಸರದಲ್ಲಿ ಕಂಡುಬಂದ ವರ್ತಮಾನವನ್ನು ನೀಡಿದ್ದು ಎಎಸ್‌ಐ ನಂಜುಂಡಯ್ಯರವರು ಇದನ್ನು ಸ್ವೀಕರಿಸಿರುತ್ತಾರೆ. ಸ್ಥಳಕ್ಕೆ ಭೇಟಿ ನೀಡಿದ ನೀವು ಈ ಪ್ರಕರಣ ಕುರಿತು ದೂರೊಂದನ್ನು ನಜೀಬ್ ರವರಿಂದ ಪಡೆದುಕೊಂಡಿರುತ್ತೀರಿ. ಯು.ಡಿ.ಆರ್. ಪ್ರಕರಣಗಳ ತನಿಖೆಗೆಂದೇ ಪ್ರತ್ಯೇಕವಾಗಿ ನೇಮಕಗೊಳಿಸಲ್ಪಟ್ಟಿದ್ದ ನೀವು ಈ ಪ್ರಕರಣಗಳ ತನಿಖೆಯಲ್ಲಿ ಸಾಕಷ್ಟು ಪರಿಣಿತಿ ಹೊಂದಿರುತ್ತೀರಿ. ಶರೀರದ ಮೇಲಿನ ಗಾಯಗಳು ಹಾಗೂ ಆತನ ಗುರುತು ಹಚ್ಚುವಿಕೆಯ ಬಗ್ಗೆ ಅಗತ್ಯವಿರುವ ಮಾಹಿತಿ ಸಂಗ್ರಹಣೆ ಇತ್ಯಾದಿ ಮೂಲಭೂತ ಕರ್ತವ್ಯಗಳನ್ನು ನಿರ್ವಹಿಸದೆ ದೊರೆತ ಲಾಶಿನ ಬಗ್ಗೆ ಅಸಮರ್ಪಕ ಹಾಗೂ ಕಾಟಾಚಾರದ ದಾಖಲೆಗಳನ್ನು ಸೃಷ್ಟಿಸಿ ಈ ದಾಖಲೆಗಳಿಗೆ ಪಿ.ಎಸ್.ಐ., ವಿಜಯಕುಮಾರ್ ರವರ ಸಹಿಗಳನ್ನು ಪಡೆದಿರುತ್ತೀರಿ.

ಈ ಪ್ರಕರಣದಲ್ಲಿ ಅಸ್ವಾಭಾವಿಕ ಮರಣದ ಮೊಕದ್ದಮೆ ದಾಖಲೆಗೊಳಿಸುವುದು ನಿಮ್ಮೆಲ್ಲರ ಆದ್ಯ ಕರ್ತವ್ಯವಾಗಿದ್ದರೂ ಹಾಗೆ ಮಾಡದೆ ಮೃತನ ಲಾಶನ್ನು ಸೆಂಟ್ ಜಾನ್ ಆಸ್ಪತ್ರೆಯ ಅನಾಟಮಿ ವಿಭಾಗಕ್ಕೆ ವಸ್ತು ನಿಷ್ಠ ಸಂಗತಿಗಳನ್ನು ಮರೆಮಾಚಿ ಕಳುಹಿಸಲು ಆಸ್ಪದವುಂಟು ಮಾಡಿರುತ್ತೀರಿ. ಈ ಮೂಲಕ ಘೋರ ಕೊಲೆ ಪ್ರಕರಣವೊಂದು ಬೆಳಕಿಗೆ ಬರದೆ ಮುಚ್ಚಿ ಹೋಗಲು ಕಾರಣಕರ್ತರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 30–03–09ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ದಿನಾಂಕ : 17–10–2006ರಿಂದ 08–05–2007ರವರೆಗಿನ ಅಮಾನತ್ತಿನ ಅವಧಿಯನ್ನು ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ : 01–09–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಲಾದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ, ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 178 ಪೊಸಿಅ 2009, ಬೆಂಗಳೂರು, ದಿನಾಂಕ: 28–08–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆದಿರಾಜು, ಮಾಜಿ ಹೆಚ್.ಸಿ., ಡಿ.ಜಿ. ಹಳ್ಳಿ, ಬೆಂಗಳೂರು ನಗರ, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ : 30–03–2009ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

(i) ಅರ್ಜಿದಾರರನ್ನು ಪುನರ್ ನೇಮಕ ಮಾಡಲಾಗಿದೆ.

(ii) ಇವರು ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ ಮೂರು ವರ್ಷಗಳ ಕಾಲ ಸಂಚಿತ ಪರಿಣಾಮ ಸಹಿತ (with cumulative effect) ವಾಗಿ ಇಳಿಸಲಾಗುವುದು, ದಂಡನೆಯ ಅವಧಿಯಲ್ಲಿ ಇವರುಗಳು ಯಾವುದೇ ವಾರ್ಷಿಕ ವೇತನ ಬಡ್ತಿಯಾಗಲಿ ಅಥವಾ ಪದೋನ್ನತಿಯನ್ನು ಪಡೆಯಲು ಅರ್ಹರಿರುವುದಿಲ್ಲ. ಇವರ ವೇತನವು ಸ್ಥಿರವಾಗಿರುತ್ತದೆ.

(iii) ಇವರು ಸೇವೆಗೆ ಪುನರ್ ನೇಮಕ ಮಾಡಿದ ದಿನಾಂಕದಿಂದ ಈ ದಂಡನೆಯು ಜಾರಿಗೆ ಬರುತ್ತದೆ.

(iv) ದಂಡನಾವಧಿಯಾದ ಮೂರು ವರ್ಷಗಳು ಪೂರ್ಣಗೊಂಡ ನಂತರ ಇವರ ವೇತನವನ್ನು ಇವರು ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವುದು.

(v) ಇವರು ಅಮಾನತ್ತಿನಲ್ಲಿದ್ದ ದಿನಾಂಕ : 17–10–06ರಿಂದ 08–05–07ರ ವರೆಗಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

(vi) ಇವರು ಸೇವೆಯಿಂದ ವಜಾಗೊಂಡ ದಿನಾಂಕದಿಂದ ಸೇವೆಗೆ ಪುನರ್ ನೇಮಕಗೊಂಡು ಕರ್ತವ್ಯಕ್ಕೆ ವರದಿ ಮಾಡಿಕೊಂಡ ದಿನಾಂಕದವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು (Dies-non) ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2329

**ಟಿ. ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಹೆಚ್. ಗಂಗಯ್ಯ, ವಿಶೇಷಾಧಿಕಾರಿ, ಶಿಕ್ಷಣ ಇಲಾಖೆ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ವಿರುದ್ಧದ ಆರೋಪಗಳಿಗೆ ವಿಚಾರಣೆ ನಡೆಸಲು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ 14ಎ ಅಡಿಯಲ್ಲಿಲ ಮಾನ್ಯ ಲೋಕಾಯುಕ್ತರಿಗೆ ವಹಿಸುವ ಬಗ್ಗೆ–ಆದೇಶ.

**ಓದಲಾಗಿದೆ:** 1. ಅಪರ ನಿಬಂಧಕರು, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ : ಕಂಪ್ಲೆಂಟ್/ಲೋಕ್/ಬಿಸಿಡಿ–127/97–98/ಎಆರ್ ಇ–5, ದಿನಾಂಕ: 28–11–2006 ಮತ್ತು 29–05–2010.

2. ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ : ಸಿಆಸುಇ 452 ಎಸ್ಇಎನ್ 2006, ದಿನಾಂಕ: 03–07–2010.

3. ಅಪರ ನಿಬಂಧಕರು, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ : ಕಂಪ್ಲೆಂಟ್/ಲೋಕ್ : ಬಿಸಿಡಿ–127/97–98 : ಎಆರ್ಇ–5, ದಿನಾಂಕ: 23–7–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 28–11–2006 ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಯ ಅಪರ ನಿಬಂಧಕರು, ವಿಚಾರಣೆಗಳು–5, ಇವರು ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಅಧಿನಿಯಮ 12 (3) ರಡಿಯಲ್ಲಿ, ತಯಾರಿಸಲಾದ ತನಿಖಾ ವರದಿ ಸಂಖ್ಯೆ : ಕಂಪ್ಲೆಂಟ್/ಲೋಕ್/ಬಿಡಿಸಿ–127/97–98/ಎಆರ್ಇ–5, ದಿನಾಂಕ : 23–11–2006ನ್ನು ಸರ್ಕಾರಕ್ಕೆ ಒದಗಿಸಿ ಮಾನ್ಯ ಲೋಕಾಯುಕ್ತರು ಮಾಡಿರುವ ಶಿಫಾರಸ್ಸಿನಂತೆ ಕ್ರಮಕೈಗೊಂಡು ಸರ್ಕಾರದ ನಿರ್ಣಯವನ್ನು ತಿಳಿಸುವಂತೆ ಕೋರಿದ್ದಾರೆ.

ಮಾನ್ಯ ಲೋಕಾಯುಕ್ತರು ತಮ್ಮ ತನಿಖಾ ವರದಿಯಲ್ಲಿ ಬೆಂಗಳೂರಿನ ಶ್ರೀ ಮಲ್ಲಿಕಾರ್ಜುನಯ್ಯ ಎಂಬುವವರು ಕರ್ನಾಟಕ ಲೋಕಾಯುಕ್ತಕ್ಕೆ ನೀಡಿದ ದೂರಿನಲ್ಲಿ ಶ್ರೀ ಹೆಚ್. ಗಂಗಯ್ಯ, ವಿಶೇಷಾಧಿಕಾರಿ (ನ್ಯಾಯಾಲಯದ ಪ್ರಕರಣಗಳು) ಶಿಕ್ಷಣ ಇಲಾಖೆ, ಇವರು ಈ ಹಿಂದೆ ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖಾ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಇವರ ವಿರುದ್ಧ ಮಾಡಿರುವ ಹಲವಾರು ದೂರುಗಳಲ್ಲಿ ಸದರಿಯವರು ಅನಾವಶ್ಯಕವಾಗಿ ರೂ. 50,000/– ಮೊತ್ತವನ್ನು ಎ.ಸಿ. ಬಿಲ್ ಮೂಲಕ ಡ್ರಾ ಮಾಡಿ ಯಾವುದೇ ಸಾಮಗ್ರಿ ಖರೀದಿಗೆ ಉಪಯೋಗಿಸದೇ ಅಥವಾ ಸರ್ಕಾರದ ಲೆಕ್ಕಕ್ಕೆ ಜಮಾ ಮಾಡದೇ ತಡೆ ಹಿಡಿದಿರುವ ಮತ್ತು ಎನ್.ಡಿ.ಸಿ. ಬಿಲ್ಲನ್ನು ನಿಗದಿತ ಸಮಯದೊಳಗೆ ಒಪ್ಪಿಸದೇ ಅನಾವಶ್ಯಕವಾಗಿ ವಿಳಂಬ ಮಾಡಿರುತ್ತಾರೆಂದು ಸದರಿಯವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳಲು ಯೋಗ್ಯವಾದ ಪ್ರಕರಣವೆಂದು ನಿರ್ಣಯಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ಅನ್ವಯ ವಿಚಾರಣೆಗಾಗಿ ಲೋಕಾಯುಕ್ತಕ್ಕೆ ವಹಿಸುವಂತೆ ಶಿಫಾರಸ್ಸು ಮಾಡಿದ್ದರು.

ಮಾನ್ಯ ಲೋಕಾಯುಕ್ತರು ನಿಯಮ 12(3) ರಡಿಯಲ್ಲಿ ಸಲ್ಲಿಸಲಾದ ವರದಿಯಲ್ಲಿನ ಅಂಶಗಳನ್ನು ಸರ್ಕಾರವು ಪರಿಶೀಲಿಸಿ ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಇವರ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ಪೂರ್ಣ ಪ್ರಮಾಣದ ವಿಚಾರಣೆಯಿಂದ ತಿಳಿಯುವ ಅನಿವಾರ್ಯತೆಯನ್ನು ಮನಗಂಡು ಮೇಲೆ ಓದಲಾದ (2)ರ ದಿನಾಂಕ : 03–07–2010 ರ ಸೇರ್ಪಡೆ ಆದೇಶದಲ್ಲಿ ಈ ಪ್ರಕರಣವನ್ನೂ ಸಹ ಈ ಹಿಂದೆ ಹೊರಡಿಸಲಾದ ಆದೇಶದ ಸಂಖ್ಯೆ : ಸಿಆಸುಇ 452 ಎಸ್ಇಎನ್ 2006, ದಿನಾಂಕ : 04–07–2007 ಕ್ಕೆ ಸೇರ್ಪಡೆ ಮಾಡಿ ವಿಚಾರಣೆ ನಡೆಸುವಂತೆ ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ : 23–07–2010 ರ ಪತ್ರದಲ್ಲಿ ಅಪರ ನಿಬಂಧಕರು ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಈಗಾಗಲೇ ದಿನಾಂಕ : 04–07–2007 ರಲ್ಲಿ ಹೊರಡಿಸಿರುವ ವಿಚಾರಣೆಯು ಪೂರ್ಣಗೊಂಡಿರುವುದರಿಂದ ಅದರೊಂದಿಗೆ ಈ ಪ್ರಕರಣವನ್ನು ಸೇರ್ಪಡೆ ಮಾಡಿ ವಿಚಾರಣೆ ನಡೆಸಲು ಸಾಧ್ಯವಿರುವುದಿಲ್ಲವೆಂದು ತಿಳಿಸುತ್ತಾ, ಈ ಬಗ್ಗೆ ಕಾನೂನು ರೀತ್ಯಾ ಮುಂದಿನ ಕ್ರಮ ವಹಿಸಲು ಕೋರಿದ್ದಾರೆ. ಸದರಿ ಕೋರಿಕೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 452 ಎಸ್ಇಎನ್ 2006, ಬೆಂಗಳೂರು, ದಿನಾಂಕ: 15-09–2010.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಮೇಲೆ (2) ರಲ್ಲಿ ಓದಲಾಗಿರುವ ಸೇರ್ಪಡೆ ಆದೇಶವನ್ನು ರದ್ದುಗೊಳಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 14ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹೆಚ್. ಗಂಗಯ್ಯ, ವಿಶೇಷಾಧಿಕಾರಿ (ನ್ಯಾಯಾಲಯದ ಪ್ರಕರಣಗಳು) ಶಿಕ್ಷಣ ಇಲಾಖೆ, ಹಿಂದಿನ ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ಮೇಲಿನ ಮೇಲ್ಕಂಡ ಆರೋಪಗಳ ಸಂಬಂಧ ಪೂರ್ಣ ಪ್ರಮಾಣದ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರಿಗೆ ವಹಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2824

**ಎ. ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–3)